# ‘ಗಾಂಧಿ ಬಂದ’ ಕಾದಂಬರಿಯ ಸಾಮಾಜಿಕ ಚಿತ್ರಣ

ಕನ್ನಡ ಎಂ.ಫಿಲ್ ಪದವಿಗಾಗಿ ಹಂಪಿಯ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಾದರ

ಪಡಿಸಿರುವ ಸಂಶೋಧನಾ ನಿಬಂಧ


**ಸಂಶೋಧನಾ ವಿದ್ಯಾರ್ಥಿ**

ಹೆಸರು : ಶ್ರೀನಾಥ್

ರಿ.ಸಂ. ೧೪೧೨೦೧೦೩೦೦೫೨

**ಮಾರ್ಗದರ್ಶಕರು**

ಡಾ.ಎಂ.ರಾಮಕೃಷ್ಣ

ಸಹಪ್ರಾಧ್ಯಾಪಕರು

ಭಾರತಿ ಕಾಲೇಜು, ಭಾರತಿನಗರ







ಕರ್ನಾಟಕ ಸಂಘ (ರಿ), ಮಂಡ್ಯ

ಎಂ.ಎಲ್.ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ

(ಕನ್ನಡ ವಿ.ವಿ.ಹಂಪಿ ಮಾನ್ಯತಾ ಸಂಸ್ಥೆ)

2015

# ‘ಗಾಂಧಿ ಬಂದ’ ಕಾದಂಬರಿಯ ಸಾಮಾಜಿಕ ಚಿತ್ರಣ

ಕನ್ನಡ ಎಂ.ಫಿಲ್ ಪದವಿಗಾಗಿ ಹಂಪಿಯ ಕನ್ನಡ ವಿಶ್ವವಿದ್ಯಾನಿಲಯಕ್ಕೆ ಸಾದರ

ಪಡಿಸಿರುವ ಸಂಶೋಧನಾ ನಿಬಂಧ



**ಸಂಶೋಧನಾ ವಿದ್ಯಾರ್ಥಿ**

ಹೆಸರು : ಶ್ರೀನಾಥ್

ರಿ.ನಂ. ೧೪೧೨೦೧೦೩೦೦೫೨

**ಮಾರ್ಗದರ್ಶಕರು**

ಡಾ.ಎಂ.ರಾಮಕೃಷ್ಣ

ಸಹಪ್ರಾಧ್ಯಾಪಕರು

ಭಾರತಿ ಕಾಲೇಜು, ಭಾರತಿನಗರ




ಕರ್ನಾಟಕ ಸಂಘ (ರಿ), ಮಂಡ್ಯ

ಎಂ.ಎಲ್.ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ

(ಕನ್ನಡ ವಿ.ವಿ.ಹಂಪಿ ಮಾನ್ಯತಾ ಸಂಸ್ಥೆ)

2015

## ಮಾರ್ಗದರ್ಶಕರ ದೃಢೀಕರಣ ಪತ್ರ

೨೦೧೪-೧೫ ನೇ ಸಾಲಿನಲ್ಲಿ **ಶ್ರೀನಾಥ್** ಎಂ.ಫಿಲ್ ವಿದ್ಯಾರ್ಥಿಯು ಈ ಪರೀಕ್ಷೆಯ ಅಂಗವಾಗಿ " **ಗಾಂಧಿ ಬಂದ ಕಾದಂಬರಿಯ ಸಾಮಾಜಿಕ ಚಿತ್ರಣ**" ಎಂಬ ವಿಷಯ ಕುರಿತು ನನ್ನ ಮಾರ್ಗದರ್ಶನದಲ್ಲಿ ಸಂಶೋಧನ ನಿಬಂಧವನ್ನು ಸಿದ್ಧಪಡಿಸಿರುತ್ತಾರೆ. ಇದನ್ನು ಇವರು ಮೊದಲು ಯಾವುದೇ ಪದವಿ, ಡಿಪ್ಲೋಮ ಅಧ್ಯಯನಕ್ಕಾಗಲಿ ಯಾವುದೇ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿಲ್ಲ ಎಂದು ದೃಢೀಕರಿಸುತ್ತೇನೆ.

ಸ್ಥಳ : ಮಂಡ್ಯ.

ದಿನಾಂಕ : 28-08-2015

ಮಾರ್ಗದರ್ಶಕರು

# ಸಂಶೋಧಕರ ಪ್ರಮಾಣ ಪತ್ರ

ಹಂಪಿ ಕನ್ನಡ ವಿಶ್ವವಿದ್ಯಾಲಯದ ಮಾನ್ಯತೆ ಪಡೆದಿರುವ ಮಂಡ್ಯದ ಕರ್ನಾಟಕ ಸಂಘದ ಶ್ರೀಕಂಠೇಶಗೌಡ, ಸಂಶೋಧನಾ ಕೇಂದ್ರದಲ್ಲಿ ೨೦೧೪-೧೫ ರ ಸಾಲಿಗೆ ಕನ್ನಡ ಎಂ.ಫಿಲ್ ಅಧ್ಯಯನದ ಅಂಗವಾಗಿ ಸಂಶೋಧನಾ ನಿಬಂಧ ರಚಿಸಲು **" ಗಾಂಧಿ ಬಂದ ಕಾದಂಬರಿಯ ಸಾಮಾಜಿಕ ಚಿತ್ರಣ"** ಎಂಬ ವಿಷಯವನ್ನು ಆಯ್ಕೆ ಮಾಡಿಕೊಂಡು ಡಾ॥ ಎ.ಆರ್.ಮದನಕುಮಾರ್ ರವರ ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಸಿ ಈ ನಿಬಂಧವನ್ನು ರಚಿಸಿರುತ್ತೇನೆ.

ಈ ನಿಬಂಧವನ್ನಾಗಲಿ, ನಿಬಂಧದ ಯಾವುದೇ ಅಧ್ಯಾಯವನ್ನಾಗಲಿ, ಬೇರೆ ಯಾವ ಗ್ರಂಥ ಅಥವಾ ನಿಯತಕಾಲಿಕೆಗಳಲ್ಲಿ ಪ್ರಕಟಿಸಿರುವುದಿಲ್ಲ ಮತ್ತು ಕನ್ನಡ ವಿಶ್ವವಿದ್ಯಾಲಯವು ನೀಡುವ ಎಂ.ಫಿಲ್ (ಕನ್ನಡ) ಪದವಿಗಾಗಿ ಈ ನಿಬಂಧವನ್ನು ಒಪ್ಪಿಸುತ್ತಿದ್ದೇನೆ

**ಸ್ಥಳ : ಮಂಡ್ಯ.**

ದಿನಾಂಕ :

Srinath

ಸಂಶೋಧನಾ ವಿದ್ಯಾರ್ಥಿ

ರಿ.ನಂ. ೧೪೧೨೦೧೦೩೦೦೫೨
**ಕರ್ನಾಟಕ ಸಂಘ (ರಿ), ಮಂಡ್ಯ**

# ಪರಿವಿಡಿ

**ಪೀಠಿಕೆ :**

# 'ಗಾಂಧಿಬಂದ' ಕಾದಂಬರಿಯ ಸಾಮಾಜಿಕ ಚಿತ್ರಣ

## ಪರಿವಿಡಿ

## * ಅಧ್ಯಯನದ ಉದ್ದೇಶ, ವ್ಯಾಪ್ತಿ ಮತ್ತು ಸ್ವರೂಪ

ಭಾರತವೂ ಧರ್ಮಾಧಾರಿತ ಸಮಾಜದಿಂದ ನಿರ್ಮಾಣವಾಗಿದೆ. ಇಂತಹ ಸಮಾಜದ ನಿರ್ಮಾಣಕ್ಕೆ ವೇದಕಾಲಿನ ಧರ್ಮವೇ ಅಡಿಪಾಯವಾಗಿದೆ. ಅಲ್ಲಿನ ವಿಚಾರ ಸಂಸ್ಕೃತಿಯ ಜೊತೆಗೆ ಅಂದಿನ ಸಾಮಾಜಿಕ ಅನಿಷ್ಟ ಪದ್ಧತಿಗಳು ಇಂದಿಗೂ ಯಥಾವತ್ತಾಗಿ ಮುಂದುವರೆದುಕೊಂಡು ಬರುತ್ತಿದೆ. ಆದರೂ ಸಹ ಇಂದು ಸಾಮಾಜಿಕ ಅನಿಷ್ಟ ಪದ್ಧತಿಗಳ ಪ್ರಕರಣಗಳು ವಿರಳವಾಗಿದೆ. ಆದರೆ ಭಾರತವು ಸ್ವಾತಂತ್ರ್ಯ ಪಡೆಯುವ ಹಿಂದಿನ ದಿನಗಳಲ್ಲಿ ಈ ಸನ್ನಿವೇಶಗಳು ಅಗಾದವಾಗಿದ್ದವು. ವರ್ಗ, ವರ್ಣ ಲಿಂಗ ತಾರತಮ್ಯಗಳ ಜೊತೆಗೆ ಸನಾತನ ಧರ್ಮದ ರೀತಿ–ನೀತಿಗಳ ರೂಢಿಯಿಂದ ಬ್ರಾಹ್ಮಣರು ಅನುಸರಿಸುತ್ತಿದ್ದ ಮೌಢ್ಯಗಳನ್ನು ಕುರಿತು ಚರ್ಚಿಸಲಾಗಿದೆ. ಮಂಗಳೂರು ಪೇಟೆಗೆ ಸ್ವಾತಂತ್ರ್ಯವನ್ನು ಕುರಿತು ಸಭೆ ನಡೆಸಲು ಬಂದ ಮಹಾತ್ಮಗಾಂಧಿಯವರ ವಿಚಾರಧಾರೆಗಳು ಹೇಗೆ ಈ ಸಾಮಾಜಿಕ ಅನಿಷ್ಟ ಪದ್ದತಿಗಳ ವಿರುದ್ದದ ದನಿಯಾಗಿದೆ ಎಂಬುದನ್ನು ಚರ್ಚಿಸುವುದು ಪ್ರಸ್ತುತ ನಿಬಂಧದ ಉದ್ದೇಶವಾಗಿದೆ.

ಪ್ರಸ್ತುತ ನಿಬಂಧದಲ್ಲಿ ಹೆಚ್.ನಾಗವೇಣಿಯವರ "ಗಾಂಧಿಬಂದ" ಕಾದಂಬರಿಯಲ್ಲಿನ ಸಾಮಾಜಿಕ ಚಿತ್ರಣವನ್ನು ಕುರಿತು ವಿವೇಚಿಸಲಾಗಿದೆ. ಕನ್ನಡದಲ್ಲಿ ಸಂಖ್ಯೆಯ ದೃಷ್ಟಿಯಿಂದ ಸಾಮಾಜಿಕ ಬದಲಾವಣೆಯ ಚಿತ್ರಣವನ್ನು ಕುರಿತು ಹೇಳಿರುವ ಕಾದಂಬರಿಗಳ ಗಾತ್ರ, ತುಸು ಹೆಚ್ಚಾಗಿಯೇ ಇದೆ. ಆದರೆ ರಾಷ್ಟ್ರೀಯ ವಿದ್ಯಮಾನಗಳನ್ನು ಸ್ಥಳೀಯ ಮಟ್ಟದಲ್ಲಿ ನೋಡಿ ವಿಶ್ಲೇಷಿಸಿರುವ ಆಳವಾಗಿ ಅಧ್ಯಯನ ಮಾಡಿರುವ ಕೃತಿಗಳ ಸಂಖ್ಯೆ ಕಡಿಮೆ ಎಂದು ಹೇಳಬಹುದು. ಈ ಹೆಚ್ಚುಗಾರಿಕೆ ಲೇಖಕಿಯ ಜೀವನಾನುಭವ ಹಾಗೂ ಹೊಸ ಆಲೋಚನ ವಿಸ್ತರಣಾ ದೃಷ್ಟಿಯಿಂದ ಬಂದಿದೆ.

ಹೆಚ್. ನಾಗವೇಣಿಯವರ ಮೊದಲ ಕಾದಂಬರಿ "ಗಾಂಧಿಬಂಧ" ಆಗಿದೆ. ಸ್ವಾತಂತ್ರ್ಯ ಪೂರ್ವದಲ್ಲಿ ಮಂಗಳೂರಿಗೆ ಗಾಂಧೀಜಿ ಆಗಮಿಸಿದ್ದರು. ಅವರು ಆಗಮದ ಹಿನ್ನೆಲೆಯಲ್ಲಿ ಸಾಮಾಜಿಕ ಸಾಂಸ್ಕೃತಿಕ ರಾಜಕೀಯ ನೆಲೆಗಳಲ್ಲಿ ಗಾಂಧೀಜಿಯ ತತ್ವಾದರ್ಶನ ಹಿನ್ನಲೆಯಲ್ಲಿ ಆದ ಬದಲಾವಣೆಗಳು ಸ್ಥಿತ್ಯಂತರಗಳು ಸಾರವತ್ತಾದ ಚಿತ್ರಣವನ್ನು ಸಮೃದ್ಧ ವಿವರಗಳೊಂದಿಗೆ ದಾಖಲಿಸುವ ಪ್ರಯತ್ನವನ್ನು ಮಾಡಿದೆ. ಹಿಂದೆ ಕಂಡು ಬಂದಿರುವ ಸಾಮಾಜಿಕ ಬದಲಾವಣೆಯ ಅಂಶಗಳಿಗಿಂತ ಬೇರೆಯದೆ ಆದ ಒಳನೋಟಗಳನ್ನು ಹೊಸ ರುಚಿಯ ಪಾಕವನ್ನು ನೀಡಬಲ್ಲವು ಎಂಬ ಉದ್ದೇಶದಿಂದ ಗಾಂಧಿಬಂಧ ಕಾದಂಬರಿಯ ಸಾಮಾಜಿಕ ಚಿತ್ರಣ ಅಧ್ಯಯನದ ಪ್ರಮುಖ ಉದ್ದೇಶವಾಗಿದೆ.

ಕರಾವಳಿಯ ವಿಶಿಷ್ಟವಾದ ಸಂಸ್ಕೃತಿಯನ್ನು ಸಂಪ್ರದಾಯವನ್ನು ಹಾಗೂ ಸಾಮಾಜಿಕ ಅವಸ್ಥಾಂತರಗಳನ್ನು ಸೆರೆ ಹಿಡಿದಿರುವ ರೀತಿ ಅಭೂತ ಪೂರ್ವವಾಗಿ ತುಳು ನಾಡಿನ ಜನರಲ್ಲಿ ಮನದಲ್ಲಿ ಸ್ಥಿರವಾಗಿ ನೆಲೆಯಾರಿದೆ. ಲೇಖಕಿಯ ಸೂಕ್ಷ್ಮತೆಗೆ ಸಂಕೇತದಂತಿರುವ ಅದ್ರಾಮನಂಥ, ದ್ರೌಪದಿ, ಶಿಖಂಡಿ, ದಾರು, ಸೀನಪ್ಪಯ್ಯ ಹೆಚ್ಚಾರರಂಥ ಅನೇಕ ಪಾತ್ರಗಳ ಪ್ರಭಾವಶಾಲಿತನವನ್ನು ಇಲ್ಲಿ

ಕಾಣಬಹುದು. ಗಾಂಧಿ ಚಳುವಳಿಯ ಪ್ರಭಾವದ ಹಿನ್ನೆಲೆಯಲ್ಲಿ ಪ್ರತಿಫಲಿಸುವ ಕುಟುಂಬಗಳು ಸಮಾಜ ಮತ್ತು ರಾಜಕೀಯ ದೃಷ್ಟಿಕೋನಗಳು ಆಕರ್ಷಕವೂ ಕಲಾತ್ಮಕವೂ ಆಗಿದೆ. ಸಮೃದ್ಧ ಅನುಭವಗಳಿಗೆ ಸತ್ವಶಾಲಿಯಾದ ಆದರೆ ನಿರ್ಲಿಪ್ತವಾದ ಅಭಿವ್ಯಕ್ತಿಯನ್ನು ನೀಡಿರುವುದು ಲೇಖಕಿಯ ದೃಷ್ಟಿಕೋನವನ್ನು ಆಲೋಚನ ಕ್ರಮವನ್ನು, ಪ್ರತಿಭಾಶಕ್ತಿಯನ್ನು ತಿಳಿಸುತ್ತದೆ.

ಸಾಮಾಜಿಕ ಅನಿಷ್ಟಗಳು ಆರ್ಯರ ಆಗಮನದ ಕಾಲದಿಂದ ಹಿಡಿದು ಸ್ವಾತಂತ್ರ್ಯ ಭಾರತದ ಆಧುನಿಕ ಕಾಲಘಟ್ಟದಲ್ಲೂ ಮುಂದುವರೆಯುತ್ತಿರುವುದನ್ನು ಗಮನಿಸಿದಾಗ ಇವು ಭಾರತೀಯ ಜನ ಸಮುದಾಯದಲ್ಲಿ ಯಾವ ರೀತಿ ಬೇರೂರಿಗೆ ಎಂಬುದನ್ನು ತಿಳಿಯಬಹುದಾಗಿದೆ. ಇಂತಹ ವಸ್ತುವನ್ನು ಇಟ್ಟುಕೊಂಡು ಪ್ರಾಚೀನ ಕನ್ನಡ ಸಾಹಿತ್ಯದಿಂದ ಹಿಡಿದು ಆಧುನಿಕ ಕನ್ನಡ ಸಾಹಿತ್ಯದವರೆಗೆ ಸಾಹಿತ್ಯದ ಹಲವು ಪ್ರಕಾರಗಳಲ್ಲಿ ಲೇಖಕರು ಮತ್ತು ಲೇಖಕಿಯರು ತಮ್ಮ ಮನೋಭಿಲಾಷಿಗೆ ಅಕ್ಷರದ ಕನ್ನಡಿ ಹಿಡಿದಿದ್ದಾರೆ. ಸಾಮಾಜಿಕ ಶೋಷಣೆಗಳನ್ನು ತಾವು ಕಂಡಿರುವ ರೀತಿ ಅದಕ್ಕೆ ಕಂಡುಕೊಂಡ ವೈಜ್ಞಾನಿಕ ಉತ್ತರಗಳನ್ನು ಸಹ ಬರೆದು ತಮ್ಮ ಕೃತಿಗಳನ್ನು ಸಾದರ ಪಡಿಸಿದ್ದಾರೆ. ವಚನಕಾರರು ತಮ್ಮ ವಚನಗಳ ಮೂಲಕ 'ದಾಸರು' ತಮ್ಮ ಕೀರ್ತನೆಗಳ ಮೂಲಕ ಸರ್ವಜ್ಞನು ತನ್ನ ತ್ರಿಪದಿಗಳ ಮೂಲಕ ಸಾಮಾಜಿಕ ಶೋಷಣೆಯನ್ನು ತಮ್ಮದೇಯಾದ ರೀತಿಯಲ್ಲಿ ಕಟುವಾಗಿ ಟೀಕಿಸಿ ಕ್ರಾಂತಿಯನ್ನು ಎಬ್ಬಿಸಿದ್ದರು. 'ಬಸವಣ್ಣನವರು' "ದಯೆಯೇ ಧರ್ಮದ ಮೂಲವಯ್ಯ" ಎನ್ನುತ್ತಾ ಎಲ್ಲಾ ಧರ್ಮಗಳ ಸಾರವೂ ಒಂದೇ ಎಂದು ಅಂತರ್ಜಾತಿ ವಿವಾಹ ಮಾಡಿಸಿ ಸಮಾನತೆ ತರಲು ಯತ್ನಿಸಿದರೆ, ಸರ್ವಜ್ಞನು "ಆ ಜಾತಿ ಈ ಜಾತಿ ಯಾವ ಜಾತಿ" ಎಂದೆನುತಾ ಎಲ್ಲಾ ಜಾತಿ ಒಂದೇ ಎನ್ನುವರು. ಹಾಗೂ ಪುರಂದರದಾಸರು "ಹೊಲೆಯ ಹೊರಗಿದನೆ ಊರೂಳಗಿಲ್ಲದೆ" ಎಂದು ಸಮಾಜದ ಶ್ರೇಣಿಗಳನ್ನು ವಿಮರ್ಶಿಸುತ್ತಾರೆ. ಇಷ್ಟಾದರೂ ಸಹ ಸಾಮಾಜಿಕ ಮೌಢ್ಯ ಆಚರಣೆಗಳು ನಿವಾರಣೆಯಾಗಲಿಲ್ಲ.

ಬ್ರಿಟಿಷರು ಸಹ ಇಂತಹ ಸಾಮಾಜಿಕ ಶೋಷಣೆಯನ್ನು ಶಿಕ್ಷಣದ ಮೂಲಕ ಹೊಸ ಹೊಸ ಕಾಯ್ದೆಯನ್ನು ಜಾರಿಗೆ ತಂದು ಸಾಮಾಜಿಕ ಬಲದಾವಣೆಗೆ ನಾಂದಿ ಹಾಡಿದರೂ ಸಹ ಇಡೀ ಭಾರತವನ್ನು ಆಕ್ರಮಿಸಿ ಆರ್ಥಿಕವಾಗಿ ಕೊಲ್ಲೆ ಹೊಡೆದು ಸ್ವಾತಂತ್ರ್ಯವನ್ನು ನೀಡದೆ ಹಿಂಸಿಸಿದರು. ಇದು ಸಹ ಒಂದು ರೀತಿಯ ಶೋಷಣೆಯಾಗಿದೆ. ಇಂತಹ ಸಂದರ್ಭದಲ್ಲಿ ಭಾರತೀಯ ರಾಜಕೀಯ ರಂಗದಲ್ಲಿ ಉದಯಿಸಿದ ಧ್ರುವತಾರೆ 'ಮಹಾತ್ಮ ಗಾಂಧೀಜಿ"ಯಾಗಿದ್ದಾರೆ.

ಇವರು ಸಿದ್ಧಾಂತಗಳೊಂದಿಗೆ ಅಹಿಂಸೆ, ಅಸಹಕಾರ ಚಳುವಳಿಯ ಮಧ್ಯಪಾನ ನಿಷೇಧ, ಉಪ್ಪಿನ ಸತ್ಯಾಗ್ರಹ, ಪರದೇಶಿ ವಸ್ತ್ರ ಬಹಿಷ್ಕಾರ, ಹರಿಜನೋದ್ಧಾರ, ಸ್ತ್ರೀಶಕ್ತಿ ಸಬಲೀಕರಣ, ಜಾತಿ ವರ್ಗ ಸಂಘರ್ಷ, ಮೌಢ್ಯ ಕಂದಾಚಾರಗಳು ಮುಂತಾವುಗಳ ಹೋರಾಟಗಳೊಂದಿಗೆ ಬ್ರಿಟಿಷರನ್ನು ಭಾರತದಿಂದ ಹೊಡೆದೊಡಿಸಿ ಸ್ವಾತಂತ್ರ್ಯವನ್ನು ಪಡೆಯುವ ಹೆಬ್ಬಯಕೆಯೊಂದಿಗೆ ಜನರನ್ನು ಸಂಘಟಿಸಿದರು.

ಇದರಿಂದ ಜನರ ಮನೋಭಾವ, ಚಿಂತನೆ, ನಡವಳಿಕೆ, ಸಂಪ್ರದಾಯದಲ್ಲಿ ಬದಲಾವಣೆಯು ಕೊಂಚ ಮಟ್ಟಿಗೆ ಗೋಚರವಾಗಲು ಆರಂಭಿಸಿದವು. ಇಂತಹ ಸಂದರ್ಭದಲ್ಲಿ ಕೆಳವರ್ಗದ ಜನರಿಗೂ

ಸಹ ಮನಸ್ಸಿದೆ. ಆಸೆ ಆಕಾಂಕ್ಷೆಗಳಿವೆ. ಎಲ್ಲರೊಂದಿಗೆ ಸಮಾನವಾಗಿ ಬದುಕಬೇಕೆಂಬ ಇಚ್ಚೆ ಇದೆ. ಆದರೆ ಸಮಾಜದ ಸನಾತನ ಧರ್ಮದ ಧಾರ್ಮಿಕ ಕಟ್ಟುಪಾಡುಗಳನ್ನು ಸಹಿಸಲಾಗದೆ ಅದರಲ್ಲೇ ನರಳಿ ಸಾಯುತ್ತಿದ್ದಾರೆ. ಸಾಮಾಜಿಕ ಶೋಷಣೆಗಳ ಅಡಿಯಲ್ಲಿ ಅನುಭವಿಸುತ್ತಿರುವ ಕ್ರೌರ್ಯ, ಹಿಂಸೆ, ಹೀನನೋಟ, ದಬ್ಬಾಳಿಕೆ, ಜೀತಪದ್ಧತಿ ಮುಂತಾದ ಇತಿಮಿತಿಗಳ ನಡುವೆ ತಮ್ಮ ಬದುಕನ್ನು ಕಟ್ಟಿಕೊಳ್ಳಲು ಹೆಣಗುತ್ತಿದ್ದಾರೆ ಎಂಬ ಅಂಶಗಳ ಬಗ್ಗೆ ತಿಳಿಸಿಕೊಡುವಲ್ಲಿ "ಗಾಂಧಿಬಂಧ" ಕಾದಂಬರಿಯು ಯಶಸ್ವಿಯಾಗಿದೆ. ಈ ದೃಷ್ಟಿಯಿಂದ ಕಾದಂಬರಿಯಲ್ಲಿ ಕಂಡುಬರುವ ಸಾಮಾಜಿಕ ಬದಲಾವಣೆಗಳ ಅವಲೋಕನವನ್ನು ತಿಳಿಸಿಕೊಡುವ ಉದ್ದೇಶದಿಂದ ಈ ನಿಬಂಧವನ್ನು ರಚಿಸಲಾಗಿದೆ.

ಈ ನಿಬಂಧವನ್ನು 5 ಅಧ್ಯಾಯಗಳನ್ನು ವಿಂಗಡಿಸಲಾಗಿದೆ. ಮೊದಲ ಅಧ್ಯಾಯವು ಕನ್ನಡ ಕಾದಂಬರಿಗಳ ಹುಟ್ಟು ಬೆಳವಣಿಗೆ ಮತ್ತು ಸಾಮಾಜಿಕ ಚಿತ್ರಣದ ಪರಿಕಲ್ಪನೆಯನ್ನು ತಿಳಿಸಿಕೊಡುವಲ್ಲಿ ಸಹಕಾರಿಯಾಗಿದೆ. ಎರಡನೇ ಅಧ್ಯಾಯವು ಕಾದಂಬರಿಯ ಲೇಖಕಿಯಾದ ಹೆಚ್.ನಾಗವೇಣಿಯವರ ಬದುಕು–ಬರಹವನ್ನು ತಿಳಿಸಲಾಗಿದೆ.

ಮೂರನೇ ಅಧ್ಯಾಯದಲ್ಲಿ ಕಾದಂಬರಿಲ್ಲಿನ ವಸ್ತು–ವಿನ್ಯಾಸ ಸನ್ನಿವೇಶಗಳು, ಪತ್ರಾಗಳು ಇತ್ಯಾದಿಗಳನ್ನು ಪರಿಚಯ ಮಾಡಿಕೊಡಲಾಗಿದೆ. ನಾಲ್ಕನೇ ಅಧ್ಯಾಯದಲ್ಲಿ ಕಾದಂಬರಿಯ ಸಂಕ್ಷಿಪ್ತ ವಿಶ್ಲೇಷಣೆ ತಿಳಿಸಲಾಗಿದೆ. ಕೊನೆಯ ಅಧ್ಯಾಯದಲ್ಲಿ ಕಾದಂಬರಿಯಲ್ಲಿ ಕಂಡು ಬರುವ ಸಾಮಾಜಿಕ ಬದಲಾವಣೆಯ ಚಿತ್ರಣ ಪ್ರಧಾನ ಆಶಯವನ್ನು ಚಿತ್ರಿಸಲಾಗಿದೆ. ಕೊನೆಗೆ ಅಧ್ಯಯನದಿಂದ ಪಡೆದ ಫಲಿತಗಳ ಬಗೆ ವಿವರಿಸಲಾಗಿದೆ. ಇದರೊಂದಿಗೆ ಆಕಾರ ಗ್ರಂಥ ಸಾಹಿತ್ಯವನ್ನು ಸೇರಿಸಲಾಗಿದೆ.

ಕಾದಂಬರಿ ವಸಾಹತು ಸಂದರ್ಭದ ಒಂದು ಪ್ರದೇಶದ ಸಾಂಸ್ಕೃತಿಕ ಬದುಕಿನ ದೇಶದ ರಾಜಕೀಯ ಆಗುಹೋಗು ಸಾಂಸ್ಕೃತಿಕ ತುಳುನಾಡಿನ ಸಂಸ್ಕೃತಿ, ಜಾತಿ, ವರ್ಣ, ಲಿಂಗ ಭೇದಗಳ ವಿರುದ್ಧ ಗಾಂಧಿಯ ವಿಚಾರಧಾರೆಗಳು ಹೇಗೆ ಸೆಣುಸುತ್ತವೆ ಎಂಬುದನ್ನು ತಿಳಿಸಲಾಗಿದೆ. ಸ್ವಾತಂತ್ರ್ಯ ಚಳುವಳಿಯು ಪ್ರಾದೇಶಿಕವಾಗಿ ವಿಸ್ತರಿಸುತ್ತಿರುವ ಸಂದರ್ಭದಲ್ಲಿ ಸಮಾಜ, ಕುಟುಂಬ ಮನುಷ್ಯ ಸಂಬಂಧಗಳ ನಡುವೆ ಏರ್ಪಡುತ್ತಿರುವ ಸಂಘರ್ಷವನ್ನು ಅದರಿಂದ ಉತ್ಪನ್ನವಾಗುವ ಮನೋಯಾತನೆಯನ್ನು ಗಾಂಧಿ ವಿಚಾರಧಾರೆಗಳು ಹೇಗೆ ಅವುಗಳ ವಿರುದ್ಧ ಹೋರಾಡಿ ಸಮಾಜದ ಬದಲಾವಣೆಗೆ ಕಾರಣವಾಗುವುದನ್ನು ವಿವಿಧ ಆಯಾಮಗಳಿಂದ ತಿಳಿಯಲು ಈ ನಿಬಂಧ ಸಹಕಾರಿಯಾಗುತ್ತವೆ ಎಂಬ ನಂಬಿಕೆ ಈ ಅಧ್ಯಯನದಿಂದ ಸಾಬೀತಾಗಲಿದೆ.

# ಅಧ್ಯಾಯ – 1

## ಅ) ಸಾಮಾಜಿಕ ಕಾದಂಬರಿಗಳ ಹುಟ್ಟು ಮತ್ತು ಬೆಳವಣಿಗೆ,

ಕಾದಂಬರಿ ಆಧುನಿಕ ಪ್ರಕಾರಗಳ ಸಾಹಿತ್ಯಗಳಲ್ಲಿಯಂತೆ ಕನ್ನಡದಲ್ಲಿಯೂ ಅತ್ಯಂತ ಲೋಕ ಪ್ರಿಯವಾದ ಸಾಹಿತ್ಯ ಪ್ರಕಾರವಾಗಿ ಬೆಳೆದುಬಂದಿದೆ.

ಹತ್ತೊಂಭತ್ತನೆಯ ಶತಮಾನದಲ್ಲಿ ಆಂಗ್ಲ ಸಾಹಿತ್ಯದ ಪ್ರಭಾವದಿಂದಾಗಿ ಸಣ್ಣಕಥೆ, ಪ್ರಬಂಧ, ಕಾದಂಬರಿ, ಭಾವಗೀತೆ, ಜೀವನಚರಿತ್ರೆ ಮೊದಲಾದ ಸಾಹಿತ್ಯ ಪ್ರಕಾರಗಳನ್ನು ಕನ್ನಡವನ್ನು ಪ್ರವೇಶಿಸಿದವು. ಇದು ಗದ್ಯ ಬಗೆಯ ವಿಸ್ತೃತ ರೂಪವೇ ಕಾದಂಬರಿ. ಈ ಸಾಹಿತ್ಯ ಪ್ರಕಾರ ಒಂದು ರೀತಿಯಿಂದ ಜಾನಪದ ಸಾಹಿತ್ಯದಂತೆ ಸಾಮಾನ್ಯಜನರ ಅಶೋತ್ತರಗಳನ್ನು ಅಭಿರುಚಿಗಳನ್ನು ಸಂಸ್ಕೃತಿಯ ಮಟ್ಟವನ್ನು ವಿವರವಾಗಿ ಪ್ರತಿಬಿಂಬಿಸುವ ಮಾಧ್ಯಮವಾಗಿದೆ. ಆದ್ದರಿಂದ ಉಳಿದ ಪ್ರಕಾರಗಳಿಗಿರುವ ರೂಪ ಲಕ್ಷಣಗಳನ್ನು ನಿಯಮ ನಿರ್ಬಂಧಗಳು ಇದಕ್ಕೆ ವಿಶಿಷ್ಟವಾಗಿರುವುದಿಲ್ಲ. ಅಲ್ಲದೆ ನಾಟಕದಂತೆ ಇದು ಪರಿಪೂರ್ಣತೆಯನ್ನು ಮುಟ್ಟಿದ ರೂಪವಾಗಿರದೆ ಇನ್ನು ಬೆಳವಣಿಗೆಯನ್ನು ಪಡೆಯುತ್ತಲಿದೆ. ಇನ್ನೊಂದು ರೀತಿಯಿಂದ ನೋಡಿದಾಗ ಇದು ಒಬ್ಬ ಲೇಖಕನ ಕೃತಿಯಾಗಿರುವುದರಿಂದ ಬರವಣಿಗೆಯ ಶೈಲಿ ಹಾಗೂ ಅವಿಷ್ಕಾರಗಳ ವೈಶಿಷ್ಯವನ್ನು ಪಡೆದಿದೆ. ಮಹಾಕಾವ್ಯ ಒಂದು ಕಾಲಕ್ಕೆ ತನ್ನ ಉದ್ದೇಶವನ್ನು ಸಾಧಿಸಿ ಐತಿಹಾಸಿಕವಾಗಿ ಮಾತ್ರ ಬದುಕಿರುವ ಸಾಹಿತ್ಯ ಪ್ರಕಾರವಾದರೆ ಕಾದಂಬರಿ ಸಮಕಾಲೀನ ಜೀವನಕ್ಕೆ ತೀರ ಯೋಗ್ಯವಾದ ರೂಪವಾಗಿದೆ. ಇಂಗ್ಲೀಷಿನ "ನಾವೆಲ್" ಎಂಬ ಪ್ರಕಾರ ಕನ್ನಡದಲ್ಲಿ 'ಕಾದಂಬರಿ' ಎಂಬ ಹೆಸರಿನಿಂದ ಪ್ರಚುರವಾಯಿತು. ಈ ಕಾದಂಬರಿ ಪ್ರಕಾರ ಒಂದು ರೀತಿಯಿಂದ ಜಾನಪದ ಸಾಹಿತ್ಯದಂತೆ ಜನಸಾಮಾನ್ಯರ ಅಶೋತ್ತರಗಲನ್ನು ಅಭಿರುಚಿಗಳನ್ನು ಸಂಸ್ಕೃತಿಯ ಮಟ್ಟವನ್ನು ವಿವರವಾಗಿ ಬಿಂಬಿಸುವ ಮಾಧ್ಯಮವಾಗಿದೆ.

ಕನ್ನಡದಲ್ಲಿ ಪ್ರಾಚೀನ ಕೃತಿಗಳಾಗಿ ಚಾವುಂಡರಾಯ ಪುರಾಣ, ಕರ್ಣಾಟಕಾದಂಬರಿ, ಮುದ್ರಾಮಂಜೂಷ ಮುಂತಾದ ಗದ್ಯಗಳಿದ್ದರೂ ಇವು ಕಾದಂಬರಿಗಳಲ್ಲ ಹೀಗಾಗಿ ಕನ್ನಡದಲ್ಲಿ ಕಾದಂಬರಿ ಬಂದದ್ದೇ 1892ರಲ್ಲಿ ಗುಲ್ವಾಡಿ ವೆಂಕಟರಾವ್ ಅವರು "ಇಂದಿರಾಬಾಯಿ" ಎಂಬ ಸಾಮಾಜಿಕ ಕಾದಂಬರಿ ಬರೆದರು ಇದನ್ನು 'ಸದ್ದಮ್ಮ ವಿಜಯ' ಎಂದು ಕರೆಯವರು. ಇದಕ್ಕಿಂತ ಮುಂಚೆ ಕನ್ನಡದಲ್ಲಿ ಸ್ವತಂತ್ರ ಕಾದಂಬರಿಗಳು ಸಿಗುವುದಿಲ್ಲ. ಅನುವಾದ ಕಾದಂಬರಿಗಳು ಮಾತ್ರವೇ ಸಿಗುತ್ತವೆ.

ಕಾದಂಬರಿ ಹುಟ್ಟಿಕೊಂಡಿದ್ದೇ ಸಾಮಾಜಿಕ ಬದುಕಿನ ಬಂಡಾಯದ ಪ್ರತೀಕವಾಗಿ ಗದ್ಯ ನಿರೂಪಣೆಯ ಕ್ರಮ ಹೀಗಾಗಿ ಗದ್ಯ ಸಾಹಿತ್ಯ ಚರಿತ್ರೆಯಲ್ಲಿ ಚಾರಿತ್ರಿಕ ಅನಿವಾರ್ಯತೆ ಗುರುತಿಸುತ್ತಾರೆ. ಈ ಚಾರಿತ್ರಿಕ ಅನಿವಾರ್ಯತೆಯ ಸಾಮಾಜಿಕ ಬದುಕಿನ ಬಂಡಾಯದ ಪ್ರತೀಕವಾಗಿ ಗದ್ಯ ನಿರೂಪಣೆಯ

ಕ್ರಮ, ಹೀಗಾಗಿ ಗದ್ಯಕ್ಕೆ ಸಾಹಿತ್ಯ ಚರಿತ್ರೆಯಲ್ಲಿ ಚಾರಿತ್ರಿಕ ಅನಿವಾರ್ಯತೆ ಗುರುತಿಸುತ್ತಾರೆ. ಈ ಚಾರಿತ್ರಿಕ ಅನಿವಾರ್ಯತೆಯ ಸಾಮಾಜಿಕ ಬದುಕಿನ ಬಂಡಾಯದ ಪ್ರತೀಕ ಗದ್ಯ ಇಲ್ಲವೆ ಕಾದಂಬರಿ ಎನ್ನುವುದು ಬಹಳ ಸಂಕೀರ್ಣ ಅರ್ಥ ಬೇಡ25

ಅವರ "ಕಾನೂರು ಹೆಗ್ಗಡತಿ" ಪ್ರಕಟವಾದವು.

ಕನ್ನಡದಲ್ಲಿ ಹೀಗೆ ಕಾದಂಬರಿಗಳ ಯುಗವು ಪ್ರಾರಂಭವಾದಂತಾಯಿತು. 1920ರಿಂದ 1945ರ ವರೆಗಿನ 25 ವರ್ಷಗಳಲ್ಲಿ ಸುಮಾರು 80 ಕಾದಂಬರಿಗಳು ಪ್ರಕಟವಾದವು. ಇದನ್ನು ಬರೆದ ಕಾದಂಬರಿಕಾರರ ಸಂಖ್ಯೆ ಸುಮಾರು 40 ಈ ಅವಧಿಯಲ್ಲಿ ಮೇಲೆ ಹೆಸರಿಸಿದ ಕಾದಂಬರಿಕಾರರಲ್ಲದೆ ಶ್ರೀನಿವಾಸ ಅವರ 'ಸುಬ್ಬಣ್ಣ' ದೇವುಡು ನರಸಿಂಹ ಶಾಸ್ತ್ರಿಗಳ 'ಅಂತರಂಗ' ಕಾರಂತರ 'ಮರಳಿಮಣ್ಣಿಗೆ' 'ಬೆಟ್ಟದ ಜೀವ' ನಾ ಕಸ್ತೂರಿಯವರ 'ಚಕ್ರದೃಷ್ಟಿ' ವಿ.ಎಂ.ಇನಾಂದರ್ ಅವರ "ಎರಡುದ್ರುವ" ಈ ಎಲ್ಲಾ ಕಾದಂಬರಿಗಳು ಪ್ರಕಟವಾಗಿದ್ದವೆಂದರೆ, ಸಂಖ್ಯೆಯಲ್ಲಿ ಮಿತವಾಗಿದ್ದರೂ ಗುಣದಲ್ಲಿ ಮಾಡಬೇಕಾದ ಸೃಷ್ಟಿ ಈ 25 ವರ್ಷಗಳಲ್ಲಿ ಆಯಿತೆನ್ನಬೇಕು. ಗುಳ್ವಾಡಿ ವೆಂಕಟರಾಯರಿಂದ ಆರಂಭವಾದ ಕಾದಂಬರಿ ಪ್ರಕಾರ ಗಳಗನಾಥ, ಕೆರೂರ ವಾಸುದೇವಾಚಾರ್, ಕುವೆಂಪು ಎಂ.ಎಸ್.ಪುಟ್ಟಣ್ಣ, ಕಾರಂತರ ಮುಂತಾದವರಿಂದ ಬಲಿಷ್ಟವಾಯಿತು. ಇವರೆಲ್ಲರೂ ನವೋದಯ ಪಂಥಕ್ಕೆ ಸೇರಿದ ಕಾದಂಬರಿಕಾರರೆಂದೂ ಹೇಳಬಹುದು. ಇಂದಿರಾಬಾಯಿ ಮಾಧವ ಕರುಣಾವಿಲಾಸ, ಇಂದಿರಾ, ಹೆಗ್ಗಡತಿ, ಮಲೆಗಳಲ್ಲಿ ಮದುಮಗಳು ಮೂಕಜ್ಜಿಯ ಕನಸುಗಳು ಮುಂತಾದವು ಇವು ನರ್ವೋದಯ ಕಾಲಘಟ್ಟದ ಮುಖ್ಯ ಕಾದಂಬರಿಗಳು.

ಬಸವರಾಜ ಕಟ್ಟೀಮನಿಯವರ ಮಾಡಿ ಮಡಿದವರು ಜ್ವಾಲಾಮುಖಿಯ ಮೇಲೆ ನಿರಂಜನರ ಚಿರಸ್ಮರಣೆ ಅನಕೃರ ನಗ್ನ ಸತ್ಯ–ಸಂಜೆಗತ್ತಲು, ಶನಿಸಂತಾನ, ತ.ರಾ.ಸು. ಅವರ ರಕ್ತರಾತ್ರಿ, ಕಂಬನಿಯ ಕುಯಿಲು ಚದುರಂಗರ ಸರ್ವಮಂಗಳಾ – ಉಯ್ಯಾಲೆ, ವೈಶಾಖ ವ್ಯಾಸರಾಯ ಬಲ್ಲಾಳದ ಹೇಮಂತಗಾನ, ಕಾಡುಮಲ್ಲಿಗೆ ಬಂಡಾಯ ಮುಂತಾದವು. ಪ್ರಗತಿ ಶಾಲ ಪಂಥಕ್ಕೆ ಸೇರಿದ ಕಾದಂಬರಿಗಳಾಗಿದೆ. ಯು.ಆರ್.ಅನಂತಮೂರ್ತಿ ಅವರ ಸಂಸ್ಕಾರ, ಭಾರತೀಪುರ, ಅವಸ್ಥೆ ಭವ ಕಾದಂಬರಿಗಳು, ಶಾಂತಿನಾಥ ದೇಸಾಯಿಯವರ ಮುಕ್ತಿ, ವಿಕ್ಷೇಪ ಕಾದಂಬರಿಗಳು ಕನ್ನಡ ಸಾಹಿತ್ಯ ಪಾಶ್ವಾತ್ಯ ಆಧುನಿಕ ತಾತ್ವಕ ಚಿಂತನೆಗಳಾದ ಅಸ್ತಿತ್ವವಾದ ಅಸಂಗತವಾದಗಳನ್ನು ರೂಢಿಸಿಕೊಂಡು ಬೆಳಕು, ಅನಾಥಪ್ರಜ್ಞೆ, ಪರಕೀಯತೆ, ಸಿನಿಕತನ ಮುಂತಾದ ಆಧುನಿಕ ಬದುಕಿನ ಒತ್ತಡ ರೋಧನೆಗಳ ಪ್ರತಿರೂಪವಾಗಿ ರಚನೆಯಾದ ನವ್ಯಕಾಲಘಟ್ಟದ ಪ್ರಮುಖ ಕಾದಂಬರಿಗಳಾಗಿವೆ.

ಸಾಂಸ್ಕೃತಿಕವಾಗಿ ಮತ್ತು ಶೈಕ್ಷಣಿಕವಾಗಿ ಅಕ್ಷರದ ಮೂಲಕ ಅಭಿವ್ಯಕ್ತಿಸಲು ತೊಡಗಿದ ಅಕ್ಷರಸ್ಥ ಸಮುದಾಯವೊಂದು ತಮ್ಮ ಸಹಜ ಅನುಭವ ಅವಮಾನ ದೌರ್ಜನ್ಯಗಳನ್ನು ಸ್ಪಷ್ಟವಾಗಿ ದಾಖಲಿಸತೊಡಗಿದ

ಕೂಡಲೇ ಒಂದು ಜನಾಂಗೀಯ ಸಾಹಿತ್ಯ ಸಿದ್ದವಾಯಿತು. ಅದನ್ನು ನಾವು ವಿಶಾಲ ಅರ್ಥದಲ್ಲಿ ಸಾಹಿತ್ಯ ಎಂದು ಕರೆಯುತ್ತೇವೆ.

ದೇವನೂರ ಮಹದೇವರವರ ಒಡಲಾಳ, ಕುಸುಮಬಾಲೆ, ಅರವಿಂದ ಮಾಲಗತ್ತಿಯವರ ಕಾರ್ಯ ಮುಳ್ಳೂರು ನಾಗರಾಜುರವರ ಧರಣಿ ಮಂಡಲ ಮಧ್ಯದೊಳಗೆ ಮ.ನ. ಜವರಯ್ಯನವರ ಮಾಗಿ, ಮುಂತಾದವು ದಲಿತ ಸಾಹಿತ್ಯ ಪಂಥಕ್ಕೆ ಸೇರಿದ ಪ್ರಮುಖ ಕೃತಿಗಳಾಗಿವೆ.

ಬಹುಶಃ ವಚನ ಚಳುವಳಿಯನ್ನು ಹೊರತು ಪಡಿಸಿದರೆ ಅಸಂಖ್ಯಾತ ದಲಿತ ಶೂದ್ರ ಸಮುದಾಯ ಬರವಣಿಗೆಯಲ್ಲಿ ತೊಡಗಿಸಿಕೊಂಡಿರುವುದು ದಲಿತ ಬಂಡಾಯ ಸಾಹಿತ್ಯ ಮುಖ್ಯವಾಗಿದೆ. ಬೆಸಗರಹಳ್ಳಿ ರಾಮಣ್ಣ, ಬರಗೂರು ರಾಮಚಂದ್ರಪ್ಪ, ಚೆನ್ನಣ್ಣ ವಾಲೀಕಾರ ದೇವನೂರ ಮಹಾದೇವ ಸಾ.ರಾ.ಅಬೂಬಕರ್ ಮುಳ್ಳೂರು ನಾಗರಾಜು ಮುಂತಾದವರ ಪ್ರಸಿದ್ಧ ಕೃತಿಗಳನ್ನು ಈ ಸಾಹಿತ್ಯದಲ್ಲಿ ಗಮನಿಸಬಹುದು.

ಈ ಬಂಡಾಯ ಸಾಹಿತ್ಯ ಮುಖ್ಯವಾದ ಸಂವೇದನೆಗಳನ್ನು ಹುಟ್ಟುಹಾಕಿದೆ. ಅವುಗಳೆಂದರೆ.

1) ದಲಿತ ಸಂವೇದನೆ

2) ಸ್ತ್ರೀ ಸಂವೇದನೆ

3) ಮುಸ್ಲಿಂ ಸಂವೇದನೆ

ಹೀಗೆ ಬಂಡಾಯ ಸಾಹಿತ್ಯ ಮುಖ್ಯವಾಗಿ ಬದುಕಿನ ಅಸಮಾನತೆಗಳ ಜಾತಿ, ಅಸ್ಪೃಶ್ಯತೆ, ಧರ್ಮ, ಪ್ರಭುತ್ವ ಲಿಂಗ, ಭೇದಗಳನ್ನು ವರ್ಗ-ಸಂಘರ್ಷಗಳನ್ನು ಕುರಿತು ತನ್ನ ಬದುಕಿನ ಇರುವಿಕೆ ಮತ್ತು ಪ್ರತಿಭಟನೆಯನ್ನು ಸಕಾಲಕ್ಕೆ ಪ್ರಕಟಿಸುತ್ತದೆ. ಕನ್ನಡ ಕಾದಂಬರಿಯ ಪರಂಪರೆಯನ್ನು 2 ಭಾಗವಾಗಿ ವಿಂಗಡಿಸುತ್ತಾರೆ.

1. ವ್ಯವಸ್ಥೆಯ ಸ್ಥಾಪಿತ ಮೌಲ್ಯಗಳನ್ನು ವೈಭವೀಕರಿಸುತ್ತಾ ಅದ್ಭುತ ರಮ್ಯತೆಯಲ್ಲಿ ಸಾಗುವ ಕ್ರಿಯ ಇದನ್ನು ನವೋದಯ ಪೂರ್ವ ಎಂತಲೂ ಗುರುತಿಸುತ್ತಾರೆ. ಐತಿಹಾಸಿಕ ಕಾದಂಬರಿಗಳು ಎನ್ನುತ್ತಾರೆ. ಇವುಗಳನ್ನು ಒಳಗೊಂಡಂತೆ ಇದುವರೆವಿಗೂ ಮುಂದುವರೆಯುತ್ತಾ ಒಳಪಡುವ ಕಾದಂಬರಿಗಳು. ಉದಾ:- ಮಾಸ್ತಿ, ತ.ರಾ.ಸು., ಭೈರಪ್ಪ, ಯಥಾಸ್ಥಿತಿಯ ಪ್ರತಿಪಾದನೆ ಇಲ್ಲಿ ಮುಖ್ಯವಾಗಿರುತ್ತದೆ. ಘೋಷಿತ ಸಿದ್ದಾಂತಗಳೇ ಪ್ರಧಾನವಾಗಿರುತ್ತದೆ. ಚರಿತ್ರೆ ಪುರಾಣವನ್ನು ವೈಭವೀಕರಿಸುವುದು. ಹುಸೀಗತವನ್ನು

ವೈಭವೀಕರಿಸುವುದು. ನಿಷ್ಕಾಮ ಸಿದ್ಧಾಂತವನ್ನು ಪ್ರತಿಪಾದಿಸುವುದು ಒಟ್ಟಾರೆ ಸಾಂಸ್ಥಿಕ ರಚನೆಯನ್ನು ಒಪ್ಪಿಕೊಂಡು ಬರೆಯುವ ಗದ್ಯ ಇಲ್ಲಿರುತ್ತದೆ. ಇದನ್ನು ಜಿ.ಎಚ್.ನಾಯಕ್ ಪ್ರತಿಗಾಮಿತಿ ಎಂದು ಕರೆಯುವರು.

ಇದಕ್ಕೆ ವಿರುದ್ಧವಾಗಿ 2ನೇಯ ವಿಧಾನವಿದೆ.

2. ನೈತಿಕತೆಯ ಜೊತೆಗೆ ಸಾಮಾಜಿಕ, ರಾಜಕೀಯ, ಆರ್ಥಿಕತೆಯ ನೆಲೆಯ ಅನನ್ಯತೆಯನ್ನು ಉಳಿಸಿಕೊಂಡ ಪರಂಪರೆ :

ಉದಾ: ನಿರಂಜನ, ತೇಜಸ್ವಿ, ಕಟ್ಟೀಮನಿ, ಕುವೆಂಪು, ಲಂಕೇಶ, ಚದುರಂಗ, ದೇವನೂರು.

ಜಗತ್ತು ನಿರ್ಲಕ್ಷ ಮಾಡಿರುವ ಸಮುದಾಯದ ಗೋಳಾಟ ಇಲ್ಲಿರುತ್ತದೆ. ನೋವು, ಅಪಮಾನ, ನಿರಾಸೆ, ಪರಕೀಯತೆ, ಅನಾಥ ಪ್ರಜ್ಞೆಗಳಿರುತ್ತದೆ. ಜೊತೆಗೆ ಅಪಮಾನವನ್ನು ಮೀರಿ ಬೆಳೆಯುವ ಬಂದುಕೋರುತನ ಇರುತ್ತದೆ. ಇದು ಸಮತೆಯ ಹಸಿವಾದ ಪರಿಕಲ್ಪನೆಯ ಶೋಧವೆಂದು ಕರೆಯುತ್ತಾರೆ. ಸಾಂಸ್ಥಿಕ ರಚನೆಗಳನ್ನು ಸಂಶಯದಿಂದ ನೋಡುವ ಕ್ರಮ ಹಾಗೂ ಸಾಂಸ್ಥಿಕ ರಚನೆಗಳನ್ನು ಮನ್ನಿಸದ ಕ್ರಮ ಇದು ಆರಾಜಕತೆಯನ್ನು ವಾಸ್ತವತೆ ಎಂದು ತಿಳಿಸುವ ಕ್ರಮ ಮತ್ತು ಈ ಭಾಗದಲ್ಲಿ ಅಪಾಯವನ್ನು ಅವಾಹನೆ ಮಾಡಿಕೊಳ್ಳುವ ಕಾದಂಬರಿಯೇ ಹೆಚ್ಚು 'ಆವಾಹನೆ' ಎಂಬ ಪದವನ್ನು ಹೆಚ್ಚಾಗಿ ಬಳಸಿದವರೆಂದರೆ ಯು.ಆರ್.ಅನಂತಮೂರ್ತಿ ಒಟ್ಟಾರೆಯಾಗಿ ಹೇಳುವುದಾದರೆ ಕಾದಂಬರಿ ಅತ್ಯಂತ ಸ್ವತಂತ್ರವಾದ ಸ್ವಚ್ಛಂದವಾದ ನಿರ್ಮಾಣದಿಂದಾದ ಸಾಹಿತ್ಯ ಪ್ರಕಾರ ಕಾದಂಬರಿಯನ್ನು 'ಕರತಲ ರಂಗಭೂಮಿ' ಎಂದು ಜೌಚಿತ್ಯಪೂರ್ಣವಾಗಿ ಕರೆಯಲಾಗಿದೆ. ಇಂಕು ಮತ್ತು ಕಾಗದ ಸಾಕಷ್ಟು ವಿರಾಮ ತಾಲ್ಲೆಗಳಿದ್ದರೆ ಯಾರು ಬೇಕಾದರೂ ಕಾದಂಬರಿ ಬರೆಯಬಹುದು ಎಂಬ ಮಾತು ಕಾದಂಬರಿಯ ಸರಳವಾಗಿದೆ.

ಸ್ವತಂತ್ರ ಸ್ವಚ್ಛಂದತೆಯನ್ನು ಕುರಿತು ಹೇಳುತ್ತದೆ. ಕಾದಂಬರಿ ಎಂದರೆ ಘಟನೆಗಳು ಸುತ್ತ ಕ್ರಿಯೆಗಳೊಡನೆ ಅನುಭವಿಸಿದ ಮತ್ತು ಸಂಗತಿಗಳು ಇವು ಜನ ಜೀವನದಲ್ಲಿ ಉಂಟಾಗಿ ಕಾದಂಬರಿಯ ಪಾತ್ರಗಳಾಗುತ್ತವೆ. ಇನ್ನೂ ಕಾದಂಬರಿಯಲ್ಲಿ ಪಾತ್ರಗಳ ಸಂಭಾಷಣೆ ಶೈಲಿ ಜೀವನದ ಬಗೆಗಿನ ಒಂದು ನಿಶ್ಚಿತ ದೃಷ್ಟಿ ಬದುಕಿನ ಕೆಲವು ಸಮಸ್ಯೆಗಳು ಅವಶ್ಯಕವಾಗಿ ನಿರೂಪಿಸಲ್ಪಟ್ಟಿರುತ್ತದೆ. ಪರಿಕರ ಪ್ರೇಕ್ಷಕನ ಅಭಿನಯದ ಅಗತ್ಯ ಇದಕ್ಕಿರುವುದಿಲ್ಲ. ನಿರಂತರ ಸವಿರಾದ ವಸ್ತುವನ್ನು ಸುಸಂಬಧವಾಗಿ ಪರಿಣಾಮಕಾರಿಯಾಗಿ ನಿರೂಪಿಸುವ ಮನಸ್ಥಿತಿ ಕಾದಂಬರಿಕಾರಗಿದ್ದರೆ ಅದು ನಿಜವಾದ ಕಾದಂಬರಿಯಾಗಿರುತ್ತದೆ. ವಿಶ್ವಸಾಹಿತ್ಯದಲ್ಲಿ ಕಾದಂಬರಿಗೆ ಅದರದ್ದೇ ಆದ ವಿಶಿಷ್ಟ ಸ್ಥಾನವಿದ್ದು ಜನಪ್ರಿಯ ಓದಿನ ಮಾಧ್ಯಮವಾಗಿದೆ.

## ಅಧ್ಯಾಯ – 2

### ಎಚ್.ನಾಗವೇಣಿಯವರ – ಬದುಕು – ಬರಹ

ಹೊಸ ತಲೆಮಾರಿನ ಕತೆಗಾರ್ತಿಯರಲ್ಲಿ ಪ್ರಮುಖರಾಗಿರುವ ಎಚ್. ನಾಗವೇಣಿಯವರು 1962ರಲ್ಲಿ ಮಂಗಳೂರಿನ ಹೊನ್ನಕಟ್ಟೆಯಲ್ಲಿ ಜನಿಸಿದರು. ಮಾಹಿತಿ ವಿಜ್ಞಾನದಲ್ಲಿ ಸ್ನಾತಕೋತ್ತರ ಪದವಿ ಪಡೆದಿದ್ದಾರೆ, ಹಲವು ವರ್ಷಗಳ ಕಾಲ ಕಲ್ಕತ್ತಾದ ರಾಷ್ಟ್ರೀಯ ಗ್ರಂಥಾಲಯದ ಕೇಂದ್ರಿಯ ಪರಮಾರ್ಶನ ಗ್ರಂಥಾಲಯದಲ್ಲಿ ಸೇವೆ ಸಲ್ಲಿಸಿದ್ದಾರೆ, ಪ್ರಸ್ತುತ ಹಂಪಿ ವಿಶ್ವವಿದ್ಯಾನಿಲಯದಲ್ಲಿ ಗ್ರಂಥಪಾಲಕರಾಗಿ ಕರ್ತವ್ಯ ನಿರ್ವಹಿಸುತ್ತಿದ್ದಾರೆ.

ಎಚ್.ನಾಗವೇಣಿಯವರು "ನಾಕನೇ ನೀರು" (1997) ಕಥಾ ಸಂಕಲನದ ಮೂಲಕ ಕನ್ನಡ ಸಾಹಿತ್ಯ ಲೋಕವನ್ನು ಪ್ರವೇಶಿಸಿದರು. 'ಗಾಂಧಿಬಂದ' ಅವರ ಮೊದಲ ಕಾದಂಬರಿಯು ನಾಗವೇಣಿಯನ್ನು ಪ್ರಭಾವಿಸಿದ್ದು, ಅದರ ಸುತ್ತಮುತ್ತಲಿನ ಪರಿಸರ, ಜನರ ಜೀವನ, ಸಂಸ್ಕೃತಿ ಅವರನ್ನು ಸಾಹಿತ್ಯದ ಲೋಕಕ್ಕೆ ಬರುವಂತೆ ಮಾಡಿತ್ತು.

ದಕ್ಷಿಣ ಕನ್ನಡ ಜಿಲ್ಲೆಯ ಕಥಾನಕಗಳು, ಭೋರ್ಗರೆಯುವ ಕಡಲು ಮುಖಕ್ಕೆ ಹನಿರಾಚುವ ಮುಂಗಾರು ಗದ್ದೆ, ತೋಟ ಬಯಲು, ಗುಡ್ಡ ನದಿ, ಮೀನು ಅವರನ್ನು ಕಾಡಿಸಿದ್ದವು. ಸುತ್ತಲ ಜನರ ಬದುಕಿನ ರೀತಿ ನೀತಿಗಳೇ ನಾಗವೇಣಿಯವರ ಸಾಹಿತ್ಯ ರಚನೆಗೆ ಸ್ಫೂರ್ತಿ "ಮೀಯುವ ಆಟ" (2005) ಅವರು ಮತ್ತೊಂದು ಕಥಾ ಸಂಕಲನವಾಗಿದೆ. "ಕರ್ನಾಟಕ ಸಾಹಿತ್ಯ ಅಕಾಡಮಿ ಪ್ರಶಸ್ತಿ" ರತ್ನಮ್ಮ ಹೆಗ್ಗಡೆ ಪ್ರಶಸ್ತಿ ಹಾಗೂ ಆರ್ಯಭಟ ಪ್ರಶಸ್ತಿಗಳು ದೊರೆತಿವೆ.

## ಅಧ್ಯಾಯ – 3

### ಕಾದಂಬರಿಯ ಸನ್ನಿವೇಶ ಪಾತ್ರಗಳು

1. ಸನ್ನಿವೇಶಗಳು   2) ಪಾತ್ರಗಳು

### 1. ಸನ್ನಿವೇಶಗಳು :-

ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಇಂದಿನವರೆಗೆ ಕಥೆ, ಕಾದಂಬರಿ, ನಾಟಕ, ಸಣ್ಣಕತೆಗಳು, ಕವಿತೆಗಳು, ಕಥಾ ಸಂಕಲಗಳನ್ನು ಹೀಗೆ ಹಲವು ಪ್ರಕಾರವಾದ ಸಾಹಿತ್ಯ ಸೃಷ್ಟಿಯಾಗಿ ಅಸಂಖ್ಯಾವಾದ ಕೃತಿಗಳು ನಿರ್ಮಾಣವಾಗಿವೆ. ಆದರೆ ಕಥೆ, ಕಾದಂಬರಿ ಹಲವು ಪಾತ್ರಗಳು ಮಾನವರು ಪ್ರಾಣಿ ಸಸ್ಯಗಳು ಕಣ್ಣೀಗೆ ಕಾಣಿಸದ ದೇವರ, ದೆವ್ವಗಳು, ನಿರ್ಜೀವ ವಸ್ತುಗಳು ಮುಂತಾದ ರೀತಿಯಾಗಿ ಕೃತಿಯಲ್ಲಿ ಕಾಣಿಸಿಕೊಳ್ಳುತ್ತವೆ. ಇಂತಹ ಪಾತ್ರ ನಿರ್ಮಾಣದ ಕೆಲಸ "ರವಿ ಕಾಣದನ್ನ ಕವಿ ಕಂಡ" ಎಂಬ ಮಾತಿಗೆ ಸಾಕ್ಷಿಯಾದ ಕವಿಯ ಪ್ರತಿಭೆಯಿಂದ ಮಾತ್ರ ಸಾಧ್ಯವಾಗುತ್ತದೆ. ಈ ಪ್ರತಿಭೆ ಎಂಬುದು ಗಂಡು–ಹೆಣ್ಣು ಪ್ರತಿಯೊಬ್ಬರಿಗೂ ಸಮವಾಗಿದ್ದು, ಅವರು ಬಳಸಿಕೊಳ್ಳುವ ಸಾಮರ್ಥ್ಯದ ಮೇಲೆ ಅದರ ಪರಿಗಣನೆಯಾಗುತ್ತದೆ.

ಗಾಂಧಿ ಬಂದ ಕಾದಂಬರಿಯಲ್ಲಿ ಶೂದ್ರ ಜನಾಂಗದ ಬದುಕಿನಲ್ಲಿ ದಾಖಲಾದ ಬಗೆ ಬಾಯಿ ಕಳೆದುಕೊಂಡೇ ಬದುಕುತ್ತಿದ್ದ ಇವರಿಗೆ ಮಾತನಾಡಲು ಹೆಚ್ಚಿದ ಪ್ರಸಂಗಗಳು ಕಾದಂಬರಿ ತಣ್ಣಗೆ ತೆರೆದಿಡುತ್ತದೆ. ಅಬ್ಬರ ಆವೇಶಗಳ ಹಂಗಿಗೊಳಗಾಗದೇ ಅಡಂಬರ ಅಟ್ಟಹಾಸಗಳ ಅನುಭವಗಳನ್ನು ತಣ್ಣಗೆ ಹರವುದರಲ್ಲಿಯೇ ಕೃತಿಯ ವೈಶಿಷ್ಟ್ಯ ಆಡಗಿದೆ.

ದಕ್ಷಿಣ ಕನ್ನಡ ಜಿಲ್ಲೆಯ ಗ್ರಾಮೀಣ ಬದುಕನ್ನು ಪರಿಸರವನ್ನು ಯಥಾವತ್ತಾಗಿ ಸಾರವತ್ತಾಗಿ ವಿಶಿಷ್ಟ ಬಗೆಯಲ್ಲಿ ಸೆರೆ ಹಿಡಿದಿರುವ ನಾಗವೇಣಿಯವರ ಕಾದಂಬರಿ ಒಂದು ಶ್ರೇಷ್ಠ ಕೃತಿ ಮಂಗಳೂರು ಜಿಲ್ಲೆಗೆ ಗಾಂಧಿಜೀಯವರ ಭೇಟಿ ಜನ ಜೀವನದಲ್ಲಿ ತಂದ ಕ್ರಾಂತಿಕಾರಕ ಬದಲಾವಣೆಗಳನ್ನು ಲೇಖಕಿ ಅತ್ಯಂತ ಮನೋಜ್ಞವಾಗಿ ಚಿತ್ರಿಸಿರುವುದು. ಈ ಕಾದಂಬರಿಯ ವಿಶೇಷವಾದ ಅಂಶವಾಗಿದೆ. ಬಳಸಿರುವ ದಕ್ಷಿಣ ಕನ್ನಡದ ಜನರ ಆಡುಭಾಷೆಯ ಸೊಗಸು ಮೆಚ್ಚುದಂತದ್ದು ಬೇರೆ ಭಾಗದ ಓದುಗರಿಗೆ ಸ್ವಲ್ಪ ಕ್ಲಿಷ್ಟ ಎನಿಸಿದರೂ ಹಿಂದಿನಿಂದ ಬಂದಿರುವ ಗ್ರಾಮೀಣ ಸಂಪ್ರದಾಯಗಳು ಅನಿಷ್ಟವಾಗಿ ಜಾತಿ ಮತ್ತು ಜೀತ ಪದ್ದತಿಗಳು ಮೇಲ್ಜಾತಿಯವರ ಅಹಮಿಕ್, ಆಚರಣೆಗಳನ್ನು ಲೇಖಕಿಯವರು ಹೃದಯಕ್ಕೆ ತಾಗುವಂತೆ ಬಣ್ಣಿಸಿದ್ದಾರೆ. ಸ್ವತಂತ್ರ ಹೋರಾಟದ ಹಿನ್ನೆಲೆಯಲ್ಲಿ ರಚಿತವಾಗಿರುವ ಈ ಕೃತಿ ಕನ್ನಡ ಸಾಹಿತ್ಯಲೋಕಕ್ಕೆ ಒಂದು ಅಮೂಲ್ಯವಾದ ಕೊಡುಗೆಯಾಗಿದೆ. ವಸಾಹತು ಸಂದರ್ಭದ ಒಂದು ಪ್ರದೇಶದ ಸಾಂಸ್ಕೃತಿಕ ಬದುಕಿನ ಒಳ ವಿವರಗಳಿಂದ ಶ್ರೀಮಂತಗೊಂಡಿದೆ. ಸ್ವಾತಂತ್ರ್ಯ ಚಳುವಳಿಯು ಪ್ರಾದೇಶಿಕವಾಗಿ ವಿಸ್ತರಿಸುತ್ತಿರುವ ಸಂದರ್ಭದಲ್ಲಿ ಸಮಾಜ ಕುಟುಂಬ ಮನುಷ್ಯ ಸಂಬಂಧಗಳ ನಡುವೆ ಏರ್ಪಡುತ್ತಿರುವ ಸಂಘರ್ಷವನ್ನು ಆದರಿಂದ ಉತ್ಪನ್ನವಾಗುವ ಮಾಯೋೀಯಾತನೆಯನ್ನು ಒಟ್ಟಿಗೆ ಈ ಕಾದಂಬರಿ ಪ್ರಕಟಿಸುತ್ತದೆ. ಅಂತಯೇ ಒಂದು ಕಾಲದ

ಸಾಂಸ್ಕೃತಿಕ ಘಟನೆಗಳ ಮುಖಾಮುಖಿಯೊಂದಿಗೆ ಹಣೆದಿರುವ ಈ ಕಥನ ಕಥನ ಪರಂಪರೆಯ ನಿಶ್ಚಲ ಪ್ರೇರಣೆ ಪ್ರಭಾವ ಮಧ್ಯೆಯೂ ತನ್ನ ಅನನ್ಯತೆಯನ್ನು ಕಾಯ್ದುಕೊಳ್ಳುವ ಕ್ರಮ ಲೇಖಕಿಯವರ ಬರವಣಿಗೆಯಲ್ಲಿ ಮನಮುಟ್ಟುವಂತಾಗಿದೆ.

ಅತ್ಯಂತ ಸರಳ ಸಹಜ ಶೈಲಿಯ ಮಾಧ್ಯಮದ ಮೂಲಕ ಅತೀ ಸಂಕೀರ್ಣವಾದ ವಿಚಾರವನ್ನು ಎತ್ತಿ ಹಿಡಿದಿದ್ದೀರಿ ? ವಿಶೇಷವಾಗಿ ಅಂತಪ್ಪ, ಮಾರಪ್ಪ, ಆದ್ರಾಮ, ದಾರು ಇವರುಗಳ ವ್ಯಕ್ತಿ ಚಿತ್ರಣ ಸೊಗಸಾಗಿ ಮೂಡಿಬಂದಿದೆ. ಉಚ್ಚ ಬ್ರಾಹ್ಮಣ ಕುಲದಲ್ಲಿ ಹುಟ್ಟಿದರೂ ತಮ್ಮ ಕೀಳು ನಡತೆಯಿಂದ ಸೀನಪ್ಪಯ್ಯ ಹೆಚ್ಚಾರರು ತಮ್ಮ ಆಳು ಪರಿವಾರದಲ್ಲಿ ಹೇಗೆ ಅಪಹಾಸ್ಯಕ್ಕೊಳಗಾಗುತ್ತಾರೆ ಎಂಬುದನ್ನು ತುಂಬಾ ಚೆನ್ನಾಗಿ ಚಿತ್ರಿಸಿದ್ದೀರಿ. ಈ ಅನುಭವಗಳು ಇತ್ತೀಚೆಗೆ ಬಹಳಷ್ಟು ಕಡೆ ಕಂಡು ಬರುವುದುಂಟು. ಕಂಬಳ, ಕೋಳಿಕಟ್ಟ, ಅಳಿಯಕಟ್ಟು ಸಂತಾನದ ವಿವರಗಳು ಕೋಲ, ವಣರಿಪೂಜೆ, ಇವುಗಳ ವಿವರಗಳಂತೂ ಬಹಳ ಚೆನ್ನಾಗಿವೆ. ಮಧ್ಯೆ ಮಧ್ಯೆ ತಾಣಸಿಗುವ ಹಲವಾರು ಸ್ವಚ್ಚ ತುಳು ಶಬ್ದಗಳು ನಮ್ಮಂಥ ಕನ್ನಡಿಗರಿಗೆ ತುಂಬಾ ಅರ್ಥವಾಗದಿದ್ದರೂ ಕಥೆಯ ಓಟಕ್ಕೆ ಯಾವುದೇ ಭಂಗ ತರುವುದಿಲ್ಲ.

ಹೀಗೇಯೇ ತುಳುನಾಡಿನ ಸಾಂಸ್ಕೃತಿಕ ಜಗತ್ತಿನಲ್ಲಿ ತುಳುನಾಡಿನ ಶ್ರೀಮಂತರ ಆಟವಾದ ಕಂಬಳ ಮತ್ತು ಬಡವರ ಕೋಳಿ ಅಂತ ಎಲ್ಲರೂ ಭಾಗವಹಿಸುವ ಭೂತಕೋಲ, ತುಳುವರ ವಿಶಿಷ್ಟ ಸಾಂಸ್ಕೃತಿಕ ಆಚರಣೆಗಳಾದ 'ಕೆಡ್ಡಸಿ' ಹಬ್ಬ (ಭೂಮಿ ತಾಯಿ ಮುಟ್ಟಾಗಿದ್ದಾಳೆ) ಎಂಬ ಪ್ರಕೃತಿ ಕಲ್ಪನೆ "ಕಂಗಿಲ" ಹಬ್ಬ (ಮಾರಿಯನ್ನು ಊರಾಟೆ ಅಟ್ಟುವ ಅಚರಣೆ) "ಮಾಯಿದ ಪುರುಷ" (ಸೋದರ-ಸೋದರಿ ವಾತ್ಸಲ್ಯದ ಕತೆ) ಇತ್ಯಾದಿ, ಮಣ್ಣೆ, ಮೂಡೆ ಮುಂತಾದ ವಿಶಿಷ್ಟ ಆಹಾರ ವಿಶೇಷತೆಗಳು ಕಬಿತೆಗಳು ಮತ್ತು ಪಾಡ್ದನಗಳು, ನಂಬಿಕೆಗಳು, ಭಯಗಳು ಇವೆಲ್ಲವುಗಳ ದೀರ್ಘ ಹಾಗೂ ವಿಶ್ವಾಸನೀಯ ವರ್ಣನೆಗಳು ಈ ಕಾದಂಬರಿ ಮೂಲ ಅಶಯವಾಗಿದೆ. ಒಂದು ನೆಲೆಯಲ್ಲಿ ಈ ಕಾದಂಬರಿ ತುಳುವ ಸಂಸ್ಕೃತಿಯ ವಿಸ್ಕೃತ ಕೈಪಿಡಿಯಂತೆಯೇ ಬಾಸವಾಗುತ್ತದೆ.

**2) ಪಾತ್ರಗಳು :-**

ಗಾಂಧಿ ಬಂದ ಕಾದಂಬರಿಯೂ ಸಹ ಹಲವಾರು ಪಾತ್ರಗಳ ನಿರ್ಮಾಣದೊಂದಿಗೆ ರಚಿತವಾದ ಒಂದು ಕೃತಿಯಾಗಿದೆ. ಇಲ್ಲಿ ನಾಯಕ-ನಾಯಕಿ ಖಳನಾಯಕ ಪೋಷಕ ಪಾತ್ರಗಳೊಂದಿಗೆ ತುಳುನಾಡಿನ ಸಂಸ್ಕೃತಿ ಪ್ರಕೃತಿ ಮೌನವು ಸಹ ಒಂದೊಂದು ಪಾತ್ರವಾಗಿ ಕಥೆಗೆ ಒಂದು ಗಮ್ಮತ್ತು ನೀಡುತ್ತದೆ. ಇದಲ್ಲದೆ ಶೀರ್ಷಿಕೆಗೆ ತಕ್ಕಂತೆ ಮಹಾತ್ಮಗಾಂಧಿಯವರೆ ಮಂಗಳೂರು ಪೇಟೆಗೆ ಸ್ವಾತಂತ್ರ್ಯ ಚಳುವಳಿಯ ಸಂದರ್ಭದಲ್ಲಿ ಬಂದಿದ್ದರಿಂದ ಅವರೇ ಕೇಂದ್ರ ಬಿಂದುವಾಗಿದ್ದು ಅವರ ಪಾತ್ರವು ಸಹ ಕತೆಯ ಓಟಕ್ಕೆ ವೇಗವನ್ನು ಸಹಜತೆಯನ್ನು ಶಕ್ತಿಯನ್ನು ತುಂಬುತ್ತವೆ.

ಅಲ್ಲದೆ ಮೊದಲನೇ ಕಾದಂಬರಿಯಲ್ಲಿಯೇ ನವರಸಗಳು ಬೆರೆತ ಕರಾವಳಿಯ ಬೃಹತ್ ಸಂಸ್ಕೃತಿ ಕಟ್ಟಿಕೊಟುವ ಕಾದಂಬರಿಯನ್ನು ರಚಿಸಿ ಸಾಹಿತ್ಯಾಸಕ್ತರ ಗಮನ ಸೆಳೆದ ಎಚ್.ನಾಗವೇಣಿಯವರ ಪ್ರತಿಭೆ, ಜಾಣ್ಮೆ ಸೃಜನಶೀಲತೆಯನ್ನು ಮೆಚ್ಚಬೇಕು. ಅವರ 'ಗಾಂಧಿಬಂದ' ಕಾಂದಬರಿಯು ಹಲವು

ಪಾತ್ರಗಳನ್ನು ಒಳಗೊಂಡಿದ್ದು ಅವುಗಳ ಪ್ರಧಾನ ಪಾತ್ರಗಳನ್ನು ಮುಂದೆ ಗಮನಿಸಬಹುದು.

**ಸೀನಪ್ಪಯ್ಯ ಹೆಬ್ಬಾರರು :**

ಬ್ರಾಹ್ಮಣ ಸಮುದಾಯಕ್ಕೆ ಸೇರಿದ ಊರಿನ ಪಟೇಲ, ಮೋಸ, ಕುಲ್ಸಿತತನ ಸುಳ್ಳು, ಸಣ್ಣತನ, ಸ್ವಾರ್ಥ, ಮಾತ್ಸರ್ಯ, ಜಾತಿಭೇದ ಮುಂತಾದ ಕೆಟ್ಟಗುಣಗಳನ್ನು ಮೈತುಂಬಿಕೊಂಡು ಸನಾತನ ಧರ್ಮದ ರೀತಿ ರಿವಾಜುನ್ನು ನಂಬಿರುವ ಸೀನಪ್ಪಯ್ಯ ಹೆಬ್ಬಾರರು. ಈ ಕಾದಂಬರಿಯ ಖಳನಾಯಕನಾಗಿದ್ದಾರೆ. ಇವರ ಪತ್ನಿ ರುಕ್ಮಿಣಿಯಮ್ಮನ ಮಗಳು ವಿಧವೆ ದ್ರೌಪತಿ ಮಗ ದಯದಹನ ವಿಧವೆ ಮಗಳ ಮರು ಮದುವೆಗೂ ಒಪ್ಪದೇ ಆಕೆಯ ಆದ್ರಾಮನೊಂದಿಗಿನ ಪ್ರೀತಿಯನ್ನು ಸಹ ಸಹಿಸದೆ ಅದ್ರಾಮವನ್ನು ಮುಗಿಸಲು ನಡೆಸುವ ಸಂಚು ಕುತಂತ್ರ ಕಾದಂಬರಿಯ ಬೆಳವಣಿಗೆ ತುಂಬಾ ಸಹಕಾರಿಯಾಗಿದೆ.

**ಅದ್ರಾಮ :-**

ಮುಸ್ಲಿಂ ಸಮುದಾಯಕ್ಕೆ ಸೇರಿದ ಜಟಕಾಗಾಡಿ ಹೊಡೆಯುವ ಈ ಅದ್ರಾಮ ಕಥಾನಾಯಕನಾಗಿದ್ದಾನೆ. ಈತ "ಮನೆಗೆ ಮಾರಿ ಊರಿಗೆ ಉಪಕಾರಿ" ಎಂಬಂತೆ ಜನರ ಪ್ರತಿಯೊಂದು ಕಷ್ಟಗಳಿಗೂ ಸ್ಪಂದಿಸುವ ಮಾನವಪ್ರೇಮಿ ಸ್ನೇಹ ಜೀವಿ ಈತ ಗಾಂಧಿ ವಿಚಾರಗಳಿಂದ ಪ್ರೇರಿತನಾಗಿ ಸ್ವಾತಂತ್ರ್ಯ ಚಳುವಳಿಯಲ್ಲಿ ಭಾಗವಹಿಸುವನು ಈತನು ಪಟೇಲ ಸೀನಪ್ಪಯ್ಯ ಹೆಬ್ಬಾರರು ಮತ್ತು ಬ್ರಾಹ್ಮಣ ಸಮುದಾಯದ ವಿರೋದದ ನಡುವೆಯೂ ಹೆಬ್ಬಾರರು ವಿಧವೆ ಮಗಳು ದ್ರೌಪದಿಯನ್ನು ಮದುವೆಯಾಗಿ ಸನಾತನ ಧರ್ಮದ ಕಟ್ಟಳೆ ಹಾಗೂ ತನ್ನ ಮುಸ್ಲಿಂ ಧರ್ಮದ ಸಾರವನ್ನು ತಿರಸ್ಕರಿಸಿ ಗಾಂಧಿಯ ಸಮಜೋದ್ಧಾರದ ಕನಸನ್ನು ನನಸು ಮಾಡಿದ ಯುವಕ ಆದರೆ ಪರದೇಶಿ ವಸ್ತ್ರ ಬಹಿಷ್ಕಾರದ ಚಳುವಳಿಯಲ್ಲಿ ಭಾಗವಹಿಸಿ ಕೆಂಪು ಪೋಲಿಸರ ಲಾಠಿ ಏಟಿಗೆ ತಲೆಯೊಡಿಸಿಕೊಂಡು ಸ್ವಾತಂತ್ರ್ಯಕ್ಕಾಗಿ ಬಲಿಯಾದ ವೀರಯುವಕ ಈ ಅದ್ರಾಮ.

**ಮಾರಪ್ಪ :-**

ಗಾಂಧಿ ಬಂದ ಕಾದಂಬರಿಯ ಮತ್ತೊಂದು ಶಕ್ತಿವಂತ ಪಾತ್ರ ಮಾರಪ್ಪ ಈತ ಶೆಟ್ಟರ ಸಮುದಾಯಕ್ಕೆ ಸೇರಿದ ಯುವಕನಾಗಿದ್ದು, ಸ್ವರಾಜ್ಯಕ್ಕಾಗಿ ಗಾಂಧಿಯವರ ವಿಚಾರಗಳಿಂದ ಪ್ರೇರಿತನಾಗಿ ಖಾದಿ ಪ್ರಚಾರ, ಮಧ್ಯಪಾನ ನಿಷೇಧ ಚಳುವಳಿ ಪರದೇಶಿ ಬಹಿಷ್ಕಾರ ಚಳುವಳಿಯಲ್ಲಿ ಭಾಗವಹಿಸಿದಾತ ಈತ ಯಾವ ಹೆಣ್ಣನ್ನು ಕಣ್ಣೆತ್ತಿ ನೋಡದೆ ಇದ್ದರೂ ಸಹ ಗಾಂಧಿ ವಿಚಾರಗಳಿಂದ ಪ್ರೇರಿತನಾಗಿ ಶಿಖಂಡಿಪಟ್ಟ ಹೊತ್ತ "ದಾರ"ವನ್ನು ಮದುವೆಯಾಗಿ ಸಮಾಜೋದ್ಧಾರಕ್ಕೆ ನಾಂದಿ ಹಾಡಿದಾತ ತನ್ನ ತಾಯಿಯ ಗೊಣಗಾಟ ವಿರೋಧದ ನಡುವೆಯ ಸಹ ಸ್ವಾಭಿಮಾನ, ದೇಶಾಭಿಮಾನಿ ಮಾರಪ್ಪ ತನ್ನೂರಿನ ಜನರನ್ನು ಜಾಗೃತಗೊಳಿಸಲು ಹಣತೊಟ್ಟ ಯುವಕನಾಗಿ ಕೃತಿಯಲ್ಲಿ ಚಿತ್ರಿತನಾಗಿದ್ದಾನೆ.

**ಕುಳ್ಳಾಗುತ್ತಿನ ಪಾಂಡುಶೆಟ್ಟಿ ಮತ್ತು ಪೆಸೂಡಿ ಗುತ್ತಿನ ಪೌಡುಶೆಟ್ಟಿ :-**

ಬ್ರಾಹ್ಮಣ ಸಮುದಾಯದ ತರುವಾಯ ಬಲಿಷ್ಟವಾದ ಶೆಟ್ಟರ ಮನೆತನಕ್ಕೆ ಸೇರಿದ ಆರ್ಥಿಕವಾಗಿ ತೋಳ್ಬಲದಿಂದ ಬಲಿಷ್ಟರಾದ ಪಾಂಡುಶೆಟ್ಟಿ ಮತ್ತು ತೌಡುಶೆಟ್ಟರು ಇಬ್ಬರು ಸಹ ಸಂಬಂಧಿಗಳಾದರೂ ಸಹ ಕುಳ್ಳಾಗುತ್ತಿನ ಪಾಂಡುಶೆಟ್ಟಿ ಹಾಗೂ ಪೆಸೂಡಿಗುತ್ತಿನ ತೌಡುಶೆಟ್ಟರು ಬೇರೆ ಬೇರೆಯಾಗಿ ಬದುಕುತ್ತಿದ್ದು, ಅಪಾರ ಆಸ್ತಿಪಾಸ್ತಿ ಜನರ ಒಡೆಯರಾಗಿದ್ದಾರೆ. ದ್ರೌಪದಿ ಆದ್ರಾಮರ ಪ್ರೀತಿಯನ್ನು ಪೋಷಿಸಿ ಮದುವೆ ಮಾಡಿಸಿ ನಂತರ ಸತ್ತ ಆದ್ರಾಮನ ಬೊಜ್ಜವನ್ನು ನೆರವೇರಿಸಿ ವಿಧವೆ ದ್ರೌಪತಿಯ ಜೀವನಕ್ಕಾಗಿ ಆರ್ಥಿಕ ಸಹಾಯ ನೀಡಿದವರು ಇವರಿಬ್ಬರೂ ಸಹ ಗಾಂಧಿಯ ವಿಚಾರಗಳಿಂದ ಪ್ರಭಾವಿತರಾಗಿ ಗಾಂಧಿನಿಧಿಗೆ ತಮ್ಮ ಕಾಣಿಕೆಗಳನ್ನು ಅರ್ಪಿಸಿದ್ದರು. ಒಟ್ಟಿನಲ್ಲಿ ಆದ್ರಾಮ ಮಾರಪ್ಪನಿಂದ ಹಿಡಿದು ಆಳು ಮಕ್ಕಳವರೆಗೂ ತಕ್ಕ ಮಟ್ಟಿಗೆ ಒಳ್ಳೆಯ ಅಭಿಪ್ರಾಯವನ್ನು ಗಳಿಸಿಕೊಂಡು ಇ ಕೃತಿಯಲ್ಲಿ ತಮ್ಮ ಸ್ಥಾನವನ್ನು ಪಡೆದಿದ್ದಾರೆ.

**ತಿಂಗಳಾಯರು :-**

ಮೋನಪ್ಪ ತಿಂಗಳಾಯರು ಬೆಸ್ತರ ಸಮುದಾಯಕ್ಕೆ ಸೇರಿದವರಾಗಿದ್ದು, ಗಾಂಧಿಜೀ ವಿಚಾರಗಳಿಂದ ಪ್ರೇರಿತರಾಗಿ ಸ್ವರಾಜ್ಯದ ಕನಸನ್ನು ನನಸು ಮಾಡುವ ಆಸೆಯನ್ನೊಂದಿದ್ದರು. ಇವರು ಬ್ರಾಹ್ಮಣ ಭೂತೈತಾಳರ ಜೊತೆ ಖಾರವಾಗಿಯೆ ಮಾತಾಡಿ ಶೂದ್ರರಿಗೂ ಬ್ರಾಹ್ಮಣರ ಜೊತೆ ಸಹಪಂಕ್ತಿ ಬೋಜನ ಮಾಡಲು ಅವಕಾಶ ಕೇಳಿ ನಂತರ ಶೂದ್ರರಲ್ಲೂ ಸಹ ಜಾತಿಭೇದ ನೋಡಿ ಇದನ್ನು ಹೋಗಲಾಡಿಸಲು ನಮ್ಮಿಂದ ಸಾಧ್ಯವಿಲ್ಲ. ಇದಕ್ಕೆ ಸಾಮಾಜಿಕ ಜಾಗೃತಿಯೊಂದೇ ದಾರಿ ಎಂದು ಹೇಳಿದರು. ಇವರು ಉಪ್ಪಿನ ಸತ್ಯಾಗ್ರಹ ಮಧ್ಯಪಾನ ನಿಷೇಧ ಚಳುವಳಿ ಪರದೇಶಿ ವಸ್ತ್ರ ಬಹಿಷ್ಕಾರ ಚಳುವಳಿಯಲ್ಲಿ ಭಾಗವಹಿಸಿ ಜೈಲು ಸೇರಿ ಬಿಡುಗಡೆ ಹೊಂದಿದ್ದರು. ಹೀಗೆ ತಿಂಗಳಯರು ಕೃತಿಯಲ್ಲಿ ತಮ್ಮ ಸ್ಥಾನ ಪಡೆದಿದ್ದಾರೆ.

**ಕಾರ್ನಾಡರು :-**

ಕಾರ್ನಾಡರು ಬ್ರಾಹ್ಮಣರ ಸಮುದಾಯಕ್ಕೆ ಸೇರಿದ್ದು ಆರ್ಥಿಕವಾಗಿ ಸಬಲರಾಗಿದ್ದವನು. ಆದರೆ ಗಾಂಧಿ ವಿಚಾರಗಳಿಗೆ ಮನಸೋತು ಸ್ವಾತಂತ್ರ್ಯ ಹೋರಾಟದಲ್ಲಿ ಪಾಲ್ಗೊಂಡರು ಇವರು ಅದಕ್ಕಾಗಿ ಊರುರು ಸುತ್ತಿ ಜನರನ್ನು ಸಂಘಟಿಸುತ್ತಿದ್ದರು. ಅಲ್ಲದೇ ಕಲ್ಕತ್ತಾ ಕಾಂಗ್ರೇಸ್ ಅಧಿವೇಶದಲ್ಲಿ ಪಾಲ್ಗೊಂಡು ಬಂದ ನಂತರ ಗಾಂಧಿಯ ಸಮಜೋದ್ಧಾರದ ಕನಸನ್ನು ನನಸು ಮಾಡಿದ ಆದ್ರಾಮ ಮತ್ತು ಮಾರಪ್ಪರನ್ನು ಕುಟುಂಬ ಸಮೇತ ಮನೆಗೆ ಕರೆದು ಔತಣ ನೀಡಿ ಸನ್ಮಾನಿಸಿ ಲಾಹೋರಿನ ಕಾಂಗ್ರೇಸ್ ಅಧಿವೇಶನಕ್ಕೆ ಪಾಲ್ಗೊಳ್ಳಲು ತೆರಳಿದರು. ಇಡೀ ಕಾದಂಬರಿಯಲ್ಲಿ ಅವರ ಪಾತ್ರ ಸ್ವಾತಂತ್ರ್ಯದ ಚೌಕಟ್ಟಿನೊಳಗೆ ಸುತ್ತುತ್ತದೆ.

**ದ್ರೌಪತಿ :-**

ಪಟೇಲ ಸೀನಪಯ್ಯ ಹೆಬ್ಬಾರರ ವಿಧವೆ ಮಗಳು ದ್ರೌಪದಿ ಈಕೆ ನರಹರಿಯನ್ನು ಮದುವೆಯಾಗಿ ಅವನ ಅಕಾಲಿಕ ಮರಣದ ತರುವಾಯ ವಿಧವೆ ಪಟ್ಟಹೊತ್ತು ತಲೆ ಬೋಳಿಸಿಕೊಂಡಿದ್ದಳು. ನಂತರ ಮನೆಯವರ ವಿರೋಧದ ನಡುವೆಯು ಸಹ ಪರಜಾತಿಯ ಆದ್ರಾಮನನ್ನು ಮದುವೆಯಾಗಿ "ಭರತ ಕುಮಾರ"ನಿಗೆ ಜನ್ಮವಿತ್ತಳು 'ಅದ್ರಾಮ'ನ ಸಾವಿನಿಂದ ಪುನಃ ತಲೆ ಬೋಳಿಸಿಕೊಂಡು ಗಾಂಧಿ ನಿದಿಗೆ ಖಾದಿ ಸೀರೆ ಆಭರಣ ನೀಡಿದಾಗ ಸ್ವತಃ ಗಾಂಧಿಯೇ ಈಕೆಗೆ ಸನ್ಮಾನಿಸಿ ಹೂ, ಕುಂಕುಮ ನೀಡುವರು. ಆಕೆ ಗಾಂಧಿ ಬಂದ ಕಾದಂಬರಿಯ ನಾಯಕಿಯಲ್ಲದೆ ದುರಂತ ನಾಯಕಿಯಾಗಿದ್ದಾಳೆ.

**'ಮಹತ್ಮಾಗಾಂಧಿ' :-**

"ಗಾಂಧಿಬಂದ" ಕಾದಂಬರಿಯ ಕೇಂದ್ರ ಒಂದು ಆಶಯ ಮಹಾತ್ಮಗಾಂಧೀಜಿ ಹಾಗೂ ಅವರ ವಿಚಾರ ಧಾರೆಯಗಳಾಗಿವೆ. ದೇಶಾದ್ಯಂತ ಸ್ವಾತಂತ್ರ್ಯ ಚಳುವಳಿ ಉಗ್ರರೂಪತಾಳಿ ಬ್ರಿಟಿಷರನ್ನು ಹೊಡೆದೋಡಿಸಿ ಸ್ವರಾಜ್ಯ ಪಡೆಯುವ ಕನಸಿನ ಬೀಜ ಬಿತ್ತಿರುವ ರೈತ ಗಾಂಧಿಯಾಗಿದ್ದಾರೆ. ಈ ಹಿನ್ನಲೆಯಲ್ಲಿ ದೇಶಾದ್ಯಂತ ಸುತ್ತಿ ಅದಕ್ಕೆ ಹಣ, ಒಡವೆ ಸಂಗ್ರಹಿಸಿದ್ದಾರೆ. ಈ ಕಾದಂಬರಿಯಲ್ಲೂ ಸಹ ಗಾಂಧಿ 3 ಸಲ ಕಾಣಿಸಿಕೊಳ್ಳುತ್ತಾರೆ. ಹಾಗೂ ಎಲ್ಲರು ಗಾಂಧಿ ನಿಧಿಗೆ ಕಾಣಿಕೆಯನ್ನು ಅರ್ಪಿಸುತ್ತಾರೆ. ಅಲ್ಲದೆ ಗಾಂಧಿ ಅಹಿಂಸೆ, ಅಸಹಕಾರ ಚಳುವಳಿ ಜಾತ್ಯಾತೀತ ಕಲ್ಪನೆಗಳು ಖಾದಿ ಪ್ರಚಾರ ಮಧ್ಯಪಾನ ನಿಷೇದ ಪರದೇಶಿ ವಸ್ತ್ರ ಬಹಿಷ್ಕಾರದ ಬಗ್ಗೆ ಜನರಿಗೆ ಮನವರಿಕೆ ಮಾಡಿಕೊಟ್ಟರು. ಇಲ್ಲಿ ಗಾಂಧಿ ಬಂದ ಎಂಬ ಶೀರ್ಷಿಕೆ "ಬದಲಾವಣೆ ತಂದ" ಎಂಬ ಅರ್ಥವನ್ನು ನೀಡಿ ಗಾಂಧಿಯ ವಿಚಾರಗಳಿಂದ ಆದ ಸಾಮಾಜಿಕ ರಾಜಕೀಯ ಸಾಂಸ್ಕೃತಿಕ ಹಾಗೂ ಆ ಊರಿನ ಜನರ ಮಾನಸಿಕ ಬದಲಾವಣೆ ಸಾಕ್ಷಿಯಾಗಿದೆ. ಆದ್ದರಿಂದ ಈ ಕೃತಿಯಲ್ಲಿ ಗಾಂಧಿಯ ಬರುವಿಕೆಯ ಕಾದಂಬರಿಯ ಮುಖ್ಯ ಆಕರ್ಷಣೆಯಾಗಿ ಈ ಕಾದಂಬರಿಯ ಪಾತ್ರದಾರಿಯಾಗಿದ್ದಾರೆ.

**ದಾರು :-**

ದಾರುವನ್ನು ಶಿಖಂಡಿಯೆಂದೂ ಊರುವರೆಲ್ಲ ಆಡಿಕೊಳ್ಳಲು ಆರಂಭಿಸಿದಾಗ ಮನೆಯಿಂದ ಹೊರಗೆ ಬರದಂತೆ ತನ್ನದಲ್ಲದ ತಪ್ಪಿಗೆ ಸಮಾಜ ನೀಡುವ ಶಿಕ್ಷೆಯಿಂದ ಭಿನ್ನಳಾಗುತ್ತಾಳೆ. ಜಾರಿಗೆ ಚಿಟ್ಟಿನ ಸುಬ್ಬಯ್ಯಶೆಟ್ಟರ ಪ್ರೀತಿಯ ಮಗಳಾದ ದಾರುವಿಗೆ ಗರ್ಭಕೋಶವೆ ಇಲ್ಲವೆಂದು ತಿಳಿದು ಯಾರು ಮದುವೆ ಮಾಡಿಕೊಳ್ಳುವುದಿಲ್ಲ. ಇದೇ ಕೊರಗಿನಲ್ಲಿ ತಾಯಿಯು ಆತ್ಮಹತ್ಯೆ ಮಾಡಿಕೊಂಡಾಗ ದಾರುವಿಗೆ ಅಳಲು ಆಗದ ಮನ ಸ್ಥಿತಿ ಇಂಥ ಸ್ಥಿತಿಯಲ್ಲಿದ್ದಾಗ ಮಾರಪ್ಪ ಅವಳನ್ನು ಮದುವೆಯಾದನು. ಆರಂಭದಲ್ಲಿ ದಾರುವನ್ನು ಮಾರಪ್ಪ ನಿರ್ಲಕ್ಷಿಸಿದರೂ ಹೆಚ್ಚು ಆತಂಕಕೊಳ್ಳಗಾಗುವುದಿಲ್ಲ. ಅವನ ಪ್ರೀತಿಯ ಮಾತುಗಳಿಗಾಗಿ ಕಾಯುತ್ತಿರುತ್ತಾಳೆ.

ಪರದೇಶಿ ವಸ್ತ್ರ ಬಹಿಷ್ಕಾರದಲ್ಲಿ ಅತ್ತೆಯ ವಿರೋಧದ ನಡುವೆಯೂ ತನಗೆ ಸಂಬಂಧಿಸಿದ ಬೆಲೆ ಬಾಳುವ ಬಟ್ಟೆಗಳನ್ನು ಒಡವೆಗಳನ್ನು ಗಾಂಧಿನಿಧಿಗೆ ಕೊಡುತ್ತಾಳೆ. ಮಾರಪ್ಪನ ಹೋರಾಟಗಳಿಗೆ ಸಂಪೂರ್ಣ ಸಹಮತ ವ್ಯಕ್ತಪಡಿಸುತ್ತಾಳೆ.

**ಸೂರಕ್ಕ :-**

ಸೂರಕ್ಕ ತನ್ನ ಬದುಕು ಮನೆ ಎನ್ನುವ ಮನೋವರ್ಗಕ್ಕೆ ಸೇರಿದವಳು. ಗಾಂಧೀ ಎಂದರೆ ಸಿಟ್ಟು ಯಾಕೆಂದರೆ, ತನ್ನ ಮಗ ಮನೆಯ ಕೆಲಸಗಳ ಮೇಲೆ ಅಸಡ್ಡೆ ತೋರಿಸಿ ದೇಶದ ಕೆಲಸಕ್ಕೆಂದೂ ಹೋರಾಡುವುದು. ಅವಳಿಗೆ ಅರ್ಥವಾಗದ ಒಗಟು ಸುಂಕ ಹಾಕಿದರೆ ಹಾಕಲಿ ಅದಕ್ಕಾಗಿ ಹೋರಾಡುವುದು ಯಾಕೆ ? ಎಂಬುದು ಅವಳ ಪ್ರಶ್ನೆ ಹಳ್ಳಿಯ ಮುಗ್ದೆಯಾಗಿ ಸೂರಕ್ಕ ಕಾಣಿಸಿಕೊಳ್ಳುತ್ತಾಳೆ.

**ರುಕುಣಿಯಮ್ಮ :-**

ಸೀನಪಯ್ಯ ಹೆಬ್ಬಾರರ ಪತ್ನಿಯಾದ ರುಕುಣಿಯಮ್ಮ ಸಿದ್ದ ಸಂದ್ರದಾಯವಾದಿ ಯಾವಗಲೂ ಯಾವುದೇ ರುಕುಣಿಯಮ್ಮ ಸಿದ್ದ ಸಂಪ್ರದಾಯವಾದಿ ಯಾವಗಲೂ ಯಾವುದೇ ಕೆಲಸವನ್ನು ಮೈಯಿಡಿ ಅವಸರ ಹೇರಿಕೊಂಡು ಸ್ಥಾನದೊಳಗಿನ ಜುಮಾದಿಯೇ ಮೈಮೇಲೆ ಬಂದಿವೆಯೇನ್ನೋ ಎಂಬಂತೆ ಅಲ್ಲಿಂದ ಇಲ್ಲಿಗೆ ಇಲ್ಲಂದ ಅಲ್ಲಿಗೆ ಯಾವಾಗಲೂ ಯಾವುದೇ ಕೆಲಸವನ್ನು ಹಂಚಿಕೊಂಡು ಓಡಾಡುವ ಸ್ವಭಾವದವರು. ಆದರೆ ಮಗಳ ವಿಚಾರದಲ್ಲಿ ಮಗಳ ವಿಚಾರದಲ್ಲಿ ಮಗಳ ಮಮಕಾರಕ್ಕಿಂತ ಪರಂಪರೆಯಿಂದ ಬಂದ ನಂಬಿಕೆಗಳೇ ಶ್ರೇಷ್ಟ ಅದರಂತೆಯೇ ವರ್ತಿಸಬೇಕೆಂಬ ಅಚಲ ಶ್ರದ್ದೆ ಅಕ್ಕಾಗಿ ತನ್ನ ಬದುಕನ್ನು ಮೀಸಲಾಗಿಟ್ಟವಳು. ಬೆಳಗಿನ ಸಂಧ್ಯಾವಂದನೆಯಿಂದ ಆರಂಭವಾಗುವ ಮಡಿ ಮೈಲಿಗೆಯು ದ್ರಾಪದಿ ಅದ್ರಾಮನನ್ನು ನೋಡದಂತೆ ದೇವರ ಕೋಣೆಗೆ ನಿರ್ದಾಕ್ಷಣ್ಯವಾಗಿ ತಳ್ಳುವುದವರೆಗೂ ಕಾಪಾಡಿಕೊಳ್ಳುತ್ತಾರೆ.

**ಪುಟ್ಟಮ್ಮಕ್ಕ :-**

ನಾರಾಯಣಭಟ್ಟರ ಪತ್ನಿಯಾದ ಪುಟ್ಟಮ್ಮಕ್ಕ ತನ್ನ ಗಂಡ ಮಲೆಮಾಳದ ಕಡೆ ತೆರಳಿದಾಗ ಸೀನಪಯ್ಯ ಹೆಬ್ಬಾರರ ಜೊತೆಗೂಡುವರು. ಮುಂದೆ ಗಾಂಧಿ ನೋಡುವ ಆಸೆ ಮನದೊಳಗಿದ್ದರೂ ಸಹ ಮಲೆಯಾಳದಿಂದ ವಾಪಸ್ಸಾಗಿರುವ ಕುಷ್ಟರೋಗಿ ಪತಿಯನ್ನು ಬಿಟ್ಟು ಹೋಗಲು ಮನಸ್ಸಾಗದೆ ಗಾಂಧಿಗಿಂತ ಗಂಡನೇ ಮುಖ್ಯನೆಂದೂ ತಿಳಿದು ಗಂಡನ ಆರೈಕೆಯಲ್ಲಿ ತೊಡಗುವರು.

**ಅಂಮುಣಿಯಮ್ಮ:-**

ಅಂಮುಣಿಯಮ್ಮನವರು ಸೀನಪಯ್ಯ ಹೆಬ್ಬಾರರ ತಾಯಿ ಎಂಬತ್ತು ಸುಗ್ಗಿಗಳನ್ನು ಕಂಡ ಅಂಮುಣಿಯಮ್ಮನವರು ಯಾವುದೇ ಕೆಲಸವನ್ನು ಆ ತಕ್ಷಣವೇ ಮಾಡಿ ಮುಗಿಸಬೇಕು. ಅಂದರೆ ಆ ಇಳಿಯಸ್ಸಲ್ಲೂ ಉತ್ಸಾಹವೇನೂ ಇಳಿದಿಲ್ಲ. ಕೆಲಸದ ಬಗ್ಗೆ ಯಾವ ಸೋಮಾರಿತನವೂ ಕಾಡಿಲ್ಲ.

ಕಥೆಯ ಆರಂಭ ತುಳುನಾಡಿನ ಕ್ರೀಡೆಗಳಲ್ಲಿ ವಿಶಿಷ್ಟವಾದ ಕಂಬಳ ಓಟದ ಸಂಭ್ರಮದೊಂದಿಗೆ ಆರಂಭವಾಗಿ ಪಾತ್ರಗಳ ಮನೋಭಾವನೆಗಳನ್ನು ಕಥೆಯ ಮುಂದುವರಿಕೆಗೆ ಭದ್ರ ಬುನಾದಿಯನ್ನೂ ಆರಂಭದಲ್ಲೇ ಕೃತಿಕಾರರು ಅಳವಡಿಸಿದ್ದಾರೆ. ಕಂಬಳದ ಕೋಣಗಳು ಓಟದಲ್ಲಿ ಗೆಲ್ಲುವುದು ಮನೆತನದ ಪ್ರತಿಷ್ಠೆಯ ಕುರುಹಾಗಿತ್ತು. ಪಟೇಲ ಸೀನಪ್ಪಯ್ಯ ಒಬ್ಬ ಧೂರ್ತ ವ್ಯಕ್ತಿಯಾಗಿ ತಾನು ಸಂಪ್ರದಾಯಬದ್ಧನೆಂದೂ ಆ ನೆರಳಲ್ಲೇ ತಾನು ತಪ್ಪು ಮಾಡಿದರೂ ಸಮಜಾಯಿಷಿ ನೀಡಿ ತನ್ನ ಮಗಳು ವಿಧವೆ ದ್ರೌಪದಿಯನ್ನು ಸಂಪ್ರದಾಯದ ಸೋಗಿನಲ್ಲಿ ಬಂಧಿಯಾಗಿಡಲು ವಿಫಲ ಪ್ರಯತ್ನ ಮಾಡುತ್ತಾನೆ. ಕಂಬಳದ ಓಟ ಸೀನಪ್ಪನ ಮನೆಯ ಸಂಭ್ರಮವಾದರೂ ಪಟೇಲನಾದುದರಿಂದ ಊರಿಗೆ ಊರೇ ಆ ಸಂಭ್ರಮದಲ್ಲಿ ತಮ್ಮ ಕೆಲಸವೆಂಬಂತೆ ಪಾಲ್ಗೊಳ್ಳಬೇಕು. ಕಂಬಳದಲ್ಲಿ ಪಟೇಲನಾದುದರಿಂದ ಊರಿಗೆ ಊರೇ ಆ ಸಂಭ್ರಮದಲ್ಲಿ ತಮ್ಮ ಕೆಸಲವೆಂಬಂತೆ ಪಾಲ್ಗೊಳ್ಳಬೇಕು. ಕಂಬಳದಲ್ಲಿ ಪಟೇಲರ ಪರವಾಗಿ ಓಡುವ ಲವಕುಶರಿಗೆ ವಿಶೇಷ ಆಸಕ್ತಿ ವಹಿಸಿ ರಾಜ ಪುರಸ್ಕಾರವನ್ನು ನೋಡಿ ಪಾಲಕ ಕೂಸಮ್ಮೈಲಿ ಹಲುಬಿದರೂ ಒಮ್ಮೆ ಸೋತ ಅನಂತರದ ಕೋಣಗಳ ಪರಿಸ್ಥಿತಿಯನ್ನು ನೆನೆಸಿಕೊಂಡು ತನಗೆ ಬಡತನವೆ ಸಾಕೆಂದರೂ ಸುಮ್ಮನಾಗುತ್ತಾನೆ.

ಕಂಬಳದ ಕೋಣಗಳ ಲವ-ಕುಶರಿಗೆ ದ್ರೌಪದಿಯನ್ನು ಹೋಲಿಸುವುದು ಕೋಳಿ ಕಟ್ಟದಲ್ಲಿ ಬಟ್ಟೆ ಮತ್ತು ಒಂಟಿಯಾಗಿ ಗುತ್ತಿನ ಪಾಂಡುಶೆಟ್ಟಿ ಹಾಗೂ ಪಟೇಲರ ಮನೆತನಗಳ ನಡುವೆ ನಡೆಯುವ ಶೀತಲ ಹೋರಾಟವು ಕೋಳಿಕಟ್ಟದಲ್ಲಿ ಸಮನಾಗಿ ಹೆಬ್ಬಾರರಿಗೆ ಸಂಬಂಧಿಸಿದ ನಾಲ್ಕು ಹಾಗೂ ಪಾಂಡುಶೆಟ್ಟಿಗೆ ಸಂಬಂಧಿಸಿದ ನಾಲ್ಕು ಕೋಳಿಗಳು ಗೆದ್ದುವೆಂದೂ ಹೇಳುವಲ್ಲಿ ಎರಡೂ ಮನೆತನದ ಹೋರಾಟದ ಸಂಪ್ರದಾಯ ಬದ್ಧವಾಗಿ ಸಂಪ್ರದಾಯ ವಿರೋಧವಾಗಿ ಸಮರ್ಪಕವಗಿಯೇ ನಡೆಯುತ್ತದೆ ಎಂಬುದಕ್ಕೆ ಸಂಕೇತವಾಗಿದೆ.

ಅಳಿಯ ಕಟ್ಟು ಸಂತಾನ ಪುರುಷ ಪ್ರಧಾನ ವ್ಯವಸ್ಥೆಗಿಂತ ಪಿತೃಪ್ರಧಾನ ಕುಟುಂಬಕ್ಕಿಂತ ವ್ಯತಿರಿಕ್ತವಾದ ಪದ್ಧತಿ ಇಲ್ಲಿ ತಾಯಿಯೇ ಮನೆಯ ಯಜಮಾನಿ, ಉತ್ತರಾಧಿಕಾರಿ ಮನೆಯ ಸರ್ವಾಧಿಕಾರಿ ಸ್ತ್ರೀ ಆಗಿರುತ್ತಾಳೆ. ಗಂಡನನ್ನು ಊಳಿಗದವನಂತೆ ಕಾಣುವುದು ಸರ್ವೇ ಸಾಮಾನ್ಯವಾಗಿರುತ್ತದೆ. ಆತನ ಗಂಡಸ್ತನಕ್ಕಾಗಿ ಮಾತ್ರ ಆತನನ್ನು ಬದುಕಿಸುವುದು ಎಂದು ಮಾರಪ್ಪ ತಾಯಿ ಸೂರಕ್ಕಂಜವ್ವ ಹೇಳುವುದು ಅಳಿಯ ಕಟ್ಟು ಸಂದಾನದಲ್ಲಿ ಪುರುಷಗಿರುವ ಮಾನ್ಯತೆ ಸ್ತ್ರೀಯ ದರ್ಪವನ್ನು ತಿಳಿಸುವುದರ ಜೊತೆಗೆ ಈ ಪದ್ದತಿಯ ಸಾಧಕಗಳನ್ನು ಕುರಿತು ಈ ಕೃತಿ ಸಂಕ್ಷಿಪ್ತವಾಗಿ ತಿಳಿಸುತ್ತದೆ.

ಕಂಗಿಲಕುಣಿತ ಮುಂಡಾಲರು ಮತ್ತು ಗೊಡ್ಡರೆಂಬ ಜನಾಂಗ ಮಾರಿಯನ್ನು ಖುಷಿಪಡಿಸಿ ಊರಿಗೆ ತಟ್ಟಿದ ಅನಿಷ್ಟ ರೋಗ ಪೀಡೆಗಳನ್ನು ದೂರಮಾಡಲೆಂದೂ ಊರಿನ ಪ್ರಮುಖರ ಮನೆಗಳಲ್ಲಿ ವಿಶೇಷ ಉಡುಗೆ-ತೊಡುಗೆಯೊಂದಿಗೆ ಮಾಯಿದ ಪುರುಷದ ಹಾಡು ಹೇಳಿ ಪ್ರತಿಯಾಗಿ ಏನ್ನನ್ನಾದರೂ ಪಡೆಯುವುದು ಪದ್ದತಿ ಇಲ್ಲಿ ದ್ರೌಪತಿಯಲ್ಲಿ ಪ್ರೇಮಾಂಕುರವಾಗಿದ್ದ ಅದ್ರಾಮನಿಗೆ ಅವಳನ್ನು ಕಾಣಬೇಕೆಂಬ ಹಂಬಲವಿದ್ದರೂ ಹೆಬ್ಬಾರರ ಕಠೋರ-ದೃಷ್ಟಿಗೆ ದ್ರೌಪದಿಯನ್ನು ಗುರಿಮಾಡಲಿಚ್ಚಿಸದೆ ಒದಗಿ ಬಂದ

ಸನ್ನಿವೇಶವನ್ನೇ ಉಪಯೋಗಿಸಿಕೊಂಡು ಮುಂಡಾಲರಲ್ಲಿ ತಾನು ವೇಷಧಾರಿಯಾಗಿ ಬಂದು ಅವಳನ್ನು ನೋಡಿ ತೃಪ್ತಿಪಟ್ಟುಕೊಳ್ಳುತ್ತೇನೆ. ಜೀವನದಲ್ಲಿ ನಿರಾಶೆಯನ್ನು ಬಳಸಿಕೊಂಡಿದ್ದ ದ್ರೌಪದಿಗೆ ಬಿಡುಗಡೆಯ ಸಂಕೇತವಾಗಿ ಗೋಚರಿಸುತ್ತಾನೆ.

ಕೋಲ ಯುಗಾದಿಯ ನಂತರ ಬರುವ ಹಬ್ಬ ಊರವರಿಗೆ ಒಕ್ಕಲು ಆಳುಗಳಿಗೆ ಸಂಭ್ರಮವಾದರೆ ಹೆಬ್ಬಾರರಿಗೆ ತಲೆನೋವಿನ ಜವಾಬ್ದಾರಿ ಕೊಡುವ ಭೋಗದಲ್ಲಿ ಕಾಲಲ್ಲಿ ಕೀಳು ತಪ್ಪಿದರೂ ಜುಮಾದಿಗೆ ಸಿಟ್ಟೇರುತ್ತದೆ. ಕೋಲ ಜುಮಾದಿಗೆ ಹರಕೆ ಕೊಡುವುದು ಈ ಪದ್ಧತಿಯ ವೈಶಿಷ್ಟ್ಯ ಅದಕ್ಕಾಗಿ ಹಾಕುವ ಚಪ್ಪರ, ಭೂತದ ಭಂಡಾರ ಸಿಂಗದನ ಬಲಿಯನ್ನು ಹೆಣೆಯುವುದು ಇವೆಲ್ಲಾ ಹಬ್ಬದ ಆಚರಣೆಗಳ ಪ್ರತೀಕವಾಗಿ ಗೋಚರಿಸುತ್ತದೆ. ಆಡಿ ಅಮಾವಾಸ್ಯೆ ಮುದ್ದಿನ ಬಗ್ಗೆ ಹೇಳುವುದಾದರೆ ಮಳೆಗಾಲದ ಸಂದರ್ಭದಲ್ಲಿ ಬಿಡುವೇ ಇಲ್ಲದೆ ಮಳೆ ಸುರಿಯುವುದರಿಂದ ರೋಗ-ರುಜಿಗಳು ಉಲ್ಬಣಗೊಳ್ಳುತ್ತದೆ. ತನ್ನ ಮಕ್ಕಳನ್ನು ರೋಗಗಳಿಂದ ಪಾರು ಮಾಡಲು ಆಡಿ ಅಮಾವಾಸ್ಯೆಯ ಮೊದಲ ರಾತ್ರಿ ಭೂತಾಯಿ ಪಾಲೆ ಮರದ ಕತ್ತೆಯಲ್ಲಿ ಔಷಧವನ್ನು ತುಂಬಿಸಿಡುತ್ತಾಳಂತೆ, ಊರಿನ ಪುರುಷರೆಲ್ಲಾ ಅಮಾವಾಸ್ಯೆ ರಾತ್ರಿಯಲ್ಲಿ ವಿವಸ್ತ್ರವಾಗಿ ಹೋಗಿ ಕಲ್ಲಿನಿಂದ ಜಜ್ಜಿ ತೆಗೆದುಕೊಂಡು ಬಂದರೆ ಕೆತ್ತಿ ಜಜ್ಜಿ ರಸ ತೆಗೆದು ಅದಕ್ಕೆ ಕರಿಮೆಣಸು ಓಮ ಮೊದಲಾದ ಪದಾರ್ಥಗಳನ್ನು ಸೇರಿಸಿ ಕಬ್ಬಿಣದ ತುಂಡೊಂದನ್ನು ಕಾಯಿಸಿ ಆ ರಸದೊಳಗೆ ಹಾಕಿಬಿಟ್ಟರೆ ಸರ್ವರೋಗ ನಿರೋಧಕ ರಾಮಬಾಣ "ಆಡಿ ಅಮಾವಾಸ್ಯೆ ಮದ್ದು" ಸಿದ್ಧವಾಗುತ್ತದೆ.

ಇವುಗಳಿಲ್ಲದೆ ಪೂರಿಪೂಜೆ ಮುದ್ರಾಧಾರಣೆ (ಬ್ರಾಹ್ಮಣರಿಗೆ ಸೀಮಿತ) ಪಟೇಲರಿಗೆ ಗೇಣಿ ಕೊಡುವುದು ಮೊದಲಾದ ಆಚರಣೆಗಳು ನಿಯಮಗಳು ಸಾಂಸ್ಕೃತಿಕ ಹಿನ್ನಲೆಯಲ್ಲಿ ವ್ಯಕ್ತಗೊಂಡಿದೆ. ಹದಿನೆಂಟರ ಎಳೆಯು ಜೋವು ದ್ರೌಪದಿಯನ್ನು ತಂದೆ ಸೀನಪ್ಪಯ್ಯ ಮತ್ತು ತಾಯಿಯ ನಿಷ್ಠಾವಂತ ಬ್ರಾಹ್ಮಣ ಸಮುದಾಯದ ಚೌಕಟ್ಟಿನಲ್ಲಿ ಬಂಧಿಸಲ್ಪಟ್ಟಿದ್ದಾರೆ. ಯಾವ ನೆರೆಯೂ ಕಪ್ಪೆಯೂ ಮೂಗನ್ನು ಮುಟ್ಟುವುದಿಲ್ಲವಂತೆ ಹಾಗೆಯೇ ನನ್ನೊಳಗಿನ ದುಗುಡ-ದುಮ್ಮಾನ ತುಡಿತ ಹೊಡೆತಗಳೂ ಅಪ್ಪಯ್ಯನಿಗೆ ಮುಟ್ಟುವುದಿಲ್ಲವೆಂದೂ ತನ್ನೊಳಗೆ ಆಕ್ರೋಶದ ಕಿಡಿಯಿದ್ದರೂ ಹೇಳುವ ಧೈರ್ಯವಿಲ್ಲ. ಧರ್ಮ ಸೂಕ್ಷ್ಮಜ್ಞರು ಆಕೆಯ ವಿರೋಧ ಬಿಕ್ಕಳಕೆಗಳ ನಡುವೆಯೇ ಆಕೆಯ ತಲೆಯನ್ನು ಬೋಳಿಸಿದರಾದರೂ ಬೋಳಿಸಿದಂತೆಲ್ಲಾ ಮತ್ತೆ ಮತ್ತೆ ಚಿಗುರಿ ಒಳೆವ ಕೂದಲಂತೆಯೇ ಆಕೆಯೊಳಗೆ ಚಿಗುರಿ ಬರುವ ಬಯಕೆ ಭಾವನೆ ಹಂಬಲಗಳನ್ನು ಅದುಮಿಡುವ ಶಕ್ತಿ ಆಕೆಗೆ ಇಲ್ಲವಾಯಿತು. ಲವ-ಕುಶರನ್ನು ನೋಡಿ ಹಬ್ಬದ ಸಡಗರವನ್ನು ಸವಿಯಬೇಕಿದ್ದ ದ್ರೌಪದಿ "ಆ ಕೋಣದ ಸಿಂಗಾರವೆಲ್ಲಾ ಜಯ ತಂದು ಕೊಡುವ ಸಾಮರ್ಥ್ಯ ಇರುವವರಿಗೆ ಮಾತ್ರ ಮುತ್ತೈದೆತನ ಕಳಚಿಕೊಂಡು ಮುಂಡೇತನ ಬಾಚಿಕೊಂಡೊಡನೆ ತನ್ನ ಸಿಂಗಾರವೆಲ್ಲಾ ನೆರೆಯ ನೀರು ಇಳಿದು ಹೋದಂತೆ ಸರ್ರನೆ ಇಳಿದು ಹೋಗಲಿಲ್ಲವೆ ಎಂದು ತನ್ನನ್ನು ಈ ವ್ಯವಸ್ಥೆಯನ್ನು ರೂಪಿಸಿದ ಇಡೀ ಸಮಾಜವನ್ನೇ ಪ್ರಶ್ನಿಸುತ್ತಾಳೆ. ಇದು ಒಂದು ಸಂಪ್ರದಾಯವು ಸ್ತ್ರೀಯ ಸಂವೇದನೆಗೆ ಸ್ಪಂದಿಸದ ಅರ್ಥಮಾಡಿಕೊಳ್ಳದ ವಿಷಯ ಸ್ಥಿತಿಯನ್ನು ಬಿಂಬಿಸುತ್ತದೆ.

ಅದ್ರಾಮ ಮತ್ತು ದ್ರೌಪದಿಯಲ್ಲಿ ಪ್ರೇಮಾಂಕುರವಾಗಿರುವುದನ್ನು ತಿಳಿದು ತಲೆಯಲ್ಲೆಲ್ಲಾ ಅದ್ರಾಮನನ್ನೇ ಕುರಿತು ಯೋಚಿಸಿ ತನ್ನ ಅಂತರಂಗಕ್ಕೆ ಪಾತಾಳಗರಡಿ ಹಾಕಿ ಶೋಧಿಸುವ ಕಾರ್ಯದಲ್ಲಿ ತಲ್ಲೀನರಾಗಿದ್ದ ಅವರಲ್ಲಿ ಹಾಳು ಬಾವಿಯ ಕೆಸರೆತ್ತುವಾಗ ತರಾವರಿ ವಸ್ತುಗಳೆದ್ದು ಬರುವಂತೆ ಅನೇಕಾನೇಕ ಭಾವನೆಗಳು ಪ್ರಶ್ನೆಗಳು ಗುಮಾನಿಗಳು ಸಮಸ್ಯೆಗಳ ಭಾರಕ್ಕೆ ಸೀನಪ್ಪಯ್ಯನ ಬ್ರಾಹ್ಮಣ ಸಂಪ್ರದಾಯ, ವ್ಯಕ್ತಿತ್ವ, ಅಹಂಕಾರ, ವರ್ಚಸ್ಸು, ಉದ್ಧಟತನ, ಚೋರತ್ವ ಎಲ್ಲವೂ ಜಗ್ಗಿಹಂತಾಗುತ್ತಿತ್ತು.

ದ್ರೌಪದಿಯನ್ನು ಸಂಪ್ರದಾಯದಾಚೆ ನೋಡದಂತೆ ಕಟ್ಟಪ್ಪಣೆ ಮಾಡಿ ಕಾವಲಿರಿಸುವ ಹೆಬ್ಬಾರರು ಸಂಜೆಯಾಗುತ್ತಲ್ಲೇ ಕೈನಾಲಿನ ಪುಟ್ಟಮ್ಮಕ್ಕನ ಹಿತ್ತಲಿನತ್ತ ದಾಪುಗಾಲಾಕುತ್ತಾನೆ. ಸಮಾನ ಕುಲಸ್ಥರ ಧರ್ಮದಲ್ಲಿ ಇಂತಹದ್ದಕ್ಕೆಲ್ಲ ಅವಕಾಶವಿದೆಯೆಂದೂ ಕಿವಿಯಲ್ಲಿ ಉಸುರುತ್ತಲೆ ಪುಟ್ಟಮ್ಮಕ್ಕ ಗರ್ಭಿಣಿಯಾದಾಗ ನಾಟಿಮದ್ದು ನೀಡಿ ಶಮನಗೊಳಿಸಿದ್ದಾರೆ. ನಾಲ್ಕನೇಯ ಮಗುವಿನ ಭ್ರೂಣ ಹತ್ಯೆ ಮಾಡುವಲ್ಲಿ ವಿಫಲರಾಗಿ ಮಗುವಿನ ಹೂಕ್ಕಳ ಬಳ್ಳಿ ಬಿಗಿಯದೆ ಮಗುವನ್ನು ನಿರ್ಜೀಗೊಳಿಸಿ ಬಟ್ಟೆಯಲ್ಲಿ ಸುತ್ತಿ ಹರಿಯುವ ನೀರಿಗೆ ನಿರ್ದಾಕ್ಷಿಣ್ಯವಾಗಿ ಎಸೆದು ಬಿಡುತ್ತಾರೆ. ನೀರಿನಲ್ಲಿ ಬಿಟ್ಟ ಎಳೆ ಮಗುವಿನ ಶವವನ್ನು ನಾಯಿ ಎಳೆದಾಡುತ್ತಿದ್ದಾಗ ಊರವರಿಗೆ ತಿಳಿದು ಪರಿತಪಿಸುವಾಗ ಮನುಷ್ಯನ ನೈತಿಕ ಅಧಃಪತನದ ಬಗ್ಗೆ ಜನರಿಗೆ ನೀತಿ ಬೋಧನೆ ಮಾಡುತ್ತಾರೆ.

ಗಾಂಧಿನಿಧಿಗೆಂದು ಕೊಟ್ಟಿದ್ದ ನಗ–ನಾಣ್ಯಗಳನ್ನು ಪುಟ್ಟಮ್ಮಕ್ಕನಿಗೆ ಕೊಟ್ಟು ಗಾಂಧಿವಾದಿಗಳ ವಿರೋಧಕ್ಕೆ ತುತ್ತಾಗುತ್ತಾರೆ. ಸನಾತನ ಬ್ರಾಹ್ಮಣ ಕೋಟೆಯಲ್ಲಿ 'ಅದ್ರಾಮ ಬಲ' ತೋಡಿ ಬರುವವನೆಂದೂ ಹೆಬ್ಬಾರರು ತಿಳಿದಿರುತ್ತಾರೆ. ಅದಕ್ಕಾಗಿ ತಮ್ಮ ಬೇಲಿಯನ್ನು ಭದ್ರವಾಗಿಡಲು ಹೆಂಡತಿ ರುಕುಣಿಯಮ್ಮನೊಂದಿಗೆ ಸೇರಿ ಯತ್ನಿಸಿದರೆ, ಆದ್ರಾಮ ಆ ಕೋಟೆಯನ್ನು ಭೇಧಿಸಿಯೇ ಒಳನುಗ್ಗಬೇಕೆಂದೂ ತಾಳೆಯಿಂದ ತಯಾರಿ ನಡೆಸುತ್ತಾರೆ. ಮಾರಪ್ಪ ತೋಡಿನ ನೀರನ್ನು ಕಡಲು ಸೇರದ ಹಾಗೇ ಮಾಡಲು ಯಾವ ಉಪಾಯವನ್ನು ಮಾಡಬಹುದೋ ಅದನ್ನೇ ಮಾಡಿಬಿಡಿ ಎಂದು ಉತ್ತರ ಕೊಡುತ್ತಾನೆ. ಧರ್ಮಶಾಸ್ತ್ರದ ಕೋಟೆಯನ್ನು ಅದ್ರಾಮನೆಂಬ ಪಡ್ಡೆಹುಡುಗ ಭೇದಿಸಿ ಹೊರಟಿರುವುದನ್ನು ಕಂಡು ಗಾಂಧಿವಾದಿಗಳಿಗೆ ಸಂತೋಷವಾಗುತ್ತದೆ. ದ್ರೌಪದಿಗೆ ವೈವಾಹಿಕ ಜೀವನಹೊಂದನ್ನು ಪ್ರಾಪ್ತಿಮಾಡಬೇಕೆಂಬ ತುಡಿತ ಹೆಚ್ಚಾಗುತ್ತದೆ. ಕರ್ನಾಡರು ಕೇರಿ ಕೇರಿ ತಿರುಗುತ್ತಾರೆ. ಇಲ್ಲಿಂದಲ್ಲೇ ಗೋಡೆಯುರುಳಿಸಬೇಕು ಎಂದು ನಿರ್ಧರಿಸುತ್ತರೆ.

ಮಾರಪ್ಪಶೆಟ್ಟಿ ಗಾಂಧಿ ವಿಚಾರಗಳಲ್ಲಿ ತನ್ನನ್ನು ತೊಡಗಿಸಿಕೊಂಡವನ್ನು ಈತನಿಗೆ ಜೀವನದ ತುಂಬಾ ದೇಶದ ಚಿಂತೆ "ಖಾದಿಯೇ ತನ್ನ ಹೆಂಡತಿ–ದೇಶವೇ ತನ್ನ ತಾಯಿ ಎಂದು ಖಾದಿ ಪ್ರಚಾರ ಅಸಹಕಾರ ಚಳುವಳಿ ಪಾನನಿಷೇಧವನ್ನು ಕುರಿತು ಗಾಂಧಿ ವಿಚಾರಗಳನ್ನು ಸಾಮಾನ್ಯ ಜನರಿಗೆ ಮುಟ್ಟಿಸಿ, ಸ್ವಾತಂತ್ರ್ಯ ಭಾರತದ ಬಗ್ಗೆ ಜಾಗೃತಿ ಮೂಡಿಸಲು ಊರುರು ತಿರುಗುವುದೇ ಈತನ ಕೆಲಸ ತಾಯಿ ಸೂರಕ್ಕನ ಯಾವ ಗೊಣಗಾಟಕ್ಕೂ ಜಗ್ಗದೇ ತನ್ನ ಕಾಯಕವನ್ನು ಮುನ್ನೆಡಿಸಿಕೊಂಡು ಬಂದವನು.

ಜಾರಿಗೆ ಚಿಟ್ಟಿನ ಸುಬ್ಬಯ್ಯಶೆಟ್ಟರ ಮಗಳು ಸೌಂದರ್ಯವತಿ ಗುಣವತಿಯಾಗಿದ್ದರೂ ಆಕೆಗೆ ಗರ್ಭಕೋಶವಿಲ್ಲದ ಕಾರಣ ಅವಳಿಗೆ ಮದುವೆ ಮಾಡುವಂತಿಲ್ಲ. ಮನೆಯವರೆಲ್ಲ ಮೊದಲು ಅನುಕಂಪದಿಂದ ನೋಡಿಕೊಳ್ಳುತ್ತಿದ್ದವರು. ಕ್ರಮೇಣ ಅವಳು ಎಲ್ಲರಿಂದ ನಿರ್ಲಕ್ಷಿಸಲ್ಪಟ್ಟವಳಾಗಿ ದಾರುವಿಗೆ ಮನಸ್ಸು ಇಲ್ಲ. ಮಾತು ಇಲ್ಲ ಎಂಬಂತೆ ವರ್ತಿಸುತ್ತಿದ್ದರು. ಕಿತ್ತು ತಿನ್ನುವ ಏಕಾಕಿತವನ್ನು ಮನಸ್ಸಿನ ಮಧುರ ಭಾವನೆಗಳನ್ನು ನೈಸರ್ಗಿಕವಾದ ದೈಹಿಕ ಒತ್ತಡಗಳನ್ನು ಅದುಮಿಡಲಾರದೆ ಹೆತ್ತವರೊಡನೆ, ಒಡಹುಟ್ಟಿದವರೊಡನೆ ಮನಸ್ಸನ್ನೂ ಬಿಚ್ಚಡಲಾಗದೆ ಜೀವಂತ ಶವವಾಗಿ ಬದುಕಿದ್ದಳು. ದಾರುವಿನ ಈ ದಾರುಣಾವಸ್ಥೆಯನ್ನು ನೋಡಲಾಗದೆ ಅಹಳ ತಾಯಿ ಆತ್ಮಹತ್ಯೆ ಮಾಡಿಕೊಂಡಳು. ದಾರು ಯಾವ ತಪ್ಪು ಮಾಡದೆ ಅನುಭವಿಸುತ್ತಿರುವ ಇಂಥ ಶಿಕ್ಷೆಯ ಬಗ್ಗೆ ಈ ಮೊದಲು ವಿಪರೀತ ಅನುಕಂಪವುಳ್ಳವನಾಗಿದ್ದ ಮಾರಪ್ಪ, ತಾಯಿಯ ಮರಣದ ಕಾರಣವಾಗಿ ಅವಳ ನೋವಿಗೆ ಪರಿಹಾರ ಸೂಚಿಸುವಂತೆ ಮದುವೆಯಾಗುವ ನಿರ್ಧಾರ ಮಾಡಿದ ದಾರುವಿನ ಬಗೆಗಿನ ನಿರ್ಧಾರ ಆತನ ವೈಯುಕ್ತಿಕ ಬದುಕಿಗೆ ಸಂಬಂಧಪಟ್ಟಿದ್ದರೂ ನೆಮ್ಮದಿಗೆಟ್ಟ ಒಂದು ಕುಟುಂಬವನ್ನೇ ಉದ್ಧಾರ ಮಾಡುವಂಥದ್ದು ಒಂದು ದುರದೃಷ್ಟ ಹೆಣ್ಣಿಗೆ ಬದುಕು ನೀಡುವಂತಹದ್ದು ಮುರುಟಿ ಸಾಯುತ್ತಿರುವ ಒಂದು ಮನಸ್ಸಿಗೆ ಚೈತನ್ಯ ನೀಡುವಂತದ್ದು, ಗಾಂಧಿಯವರ ಸಮಾಜೋದ್ಧಾರದ ದಾರಿಯನ್ನು ತಾನೇ ತುಳದು ತೋರುವನೆಂಬ ಛಲವರಿಬೇಕೆಂಬ ಗುತ್ತಿನ ಶೆಟ್ರುಗಳೆಲ್ಲಾ ಸೇರಿ ಯೋಚಿಸಿದರು. ಈತನನ್ನು ಬೇರೆ ಬೇರೆ ರೀತಿಯಿಂದ ಪ್ರಶ್ನಿಸಿ ಪರೀಕ್ಷಿಸಿ ಅನಂತರ ದಾರುವಿನೊಂದಿಗೆ ಮದುವೆ ಮಾಡಿದರು. ಮಾರಪ್ಪನಿಗೆ ಬೇಕಾದುದ್ದು ಆಕೆಯ ನೆಮ್ಮದಿ ತುಂಬಿದ ನಗುಮುಖದಷ್ಟೇ, ಒಬ್ಬ ಹತ ಭಾಗ್ಯಯ ಆರುತ್ತಿರುವ ಬದುಕಿನ ಬೆಳಕನ್ನು ಊಹಿಸುವುದಷ್ಟೇ ಮದುವೆಯ ಭಾಗ್ಯವೇಯಿಲ್ಲದೆ ಕೊರಗುತ್ತಿದ್ದವಳಿಗೆ ಅವಳಿಗಿಂತ ಹೆಚ್ಚಿನದಾಗಿ ಆಡಿಕೊಳ್ಳುವ ಜನರನ್ನು ಸುಮ್ಮನಿರಿಸುವುದು ಅವನ ಮುಖ್ಯ ಉದ್ದೇಶವಾಗಿತ್ತು.

ಗಾಂಧಿಜೀ ಸತ್ಯ, ಅಹಿಂಸೆ, ಶಾಂತಿ ಎಂಬ ಆಯುಧಗಳನ್ನು ಇಟ್ಟುಕೊಂಡು ಬ್ರಿಟಿಷರ ವಿರುದ್ಧ ರಾಷ್ಟ್ರಮಟ್ಟದಲ್ಲಿ ಹೋರಾಡುತ್ತಿದ್ದರು. ಅವರ ಅಸಂಖ್ಯಾತ ಅನುಯಾಯಿಗಳು ದೇಶದಾದ್ಯಂತ ಗಾಂಧಿಜೀಯವರ ಚಿಂತನೆ, ವಿಚಾರಗಳ ಬಗ್ಗೆ. ಸ್ವತಂತ್ರ ಭಾರತದ ಅಸ್ತಿತ್ವದ ಅಗತ್ಯವನ್ನು ಬ್ರಿಟಿಷರ ದಬ್ಬಾಳಿಕೆಯನ್ನು ಘೋಷಣೆಯನ್ನು ಎದುರಿಸುವುದನ್ನು ಹಳ್ಳಿ-ಹಳ್ಳಿಗಳಲ್ಲಿ ಸಾಮಾನ್ಯ ಜನರಿಗೆ ತಿಳಿಸುವ ಪ್ರಯತ್ನವನ್ನು ಮಾಡುತ್ತಿದ್ದರು. ಕಾರ್ನಾಡು ಸದಾಶಿವರಾಯರು ತಿಂಗಳರಾಯರು, ತೌಡುಶೆಟ್ಟಿ, ಮಾರಪ್ಪ, ಅದ್ರಾಮ, ಮೊದಲಾದವರು ಗಾಂಧಿ ಬಿಚಾರಗಳಿಂದ ಪ್ರಭಾವಿತರಾಗಿದ್ದರು. ಅಸಹಕಾರ ಚಳುವಳಿ, ಪಾನನಿಷೇಧ, ಖಾಲಿ ಪ್ರಚಾರ ಹರಿಜನ ಉದ್ಧಾರ, ಇದೇ ಮೊದಲಾದ ಕಾರ್ಯಗಳನ್ನು ಮಾಡಲು ಉಳಿದವರನ್ನು ಎಚ್ಚರಿಸುವ ಕೆಲಸವನ್ನು ಗ್ರಾಮಗಳಲ್ಲಿ ಮಾಡುತ್ತಿರುತ್ತಾರೆ. ಗಾಂಧಿಚಿಂತನಗಳು ಎಲ್ಲಾ ಹಳ್ಳಿಗಳ ಜನ-ಮನದಲ್ಲೂ ನೆಲೆಯೂರುವಂತೆ ಮಾಡುತ್ತಿದ್ದರು. ಫಲಪ್ರದವಾಗಿ ಸಾಮಾನ್ಯ ಜನರು ಈ ವಿಷಯಗಳ ಕಡೆ ಕಿವಿಗೊಟ್ಟು ಕೇಳುವಂತಾದರು. ಸ್ವರಾಜ್ಯ ಸಂಪಾದನೆಯ ದೀಕ್ಷೆ ಪಡೆದ ಮಾರಪ್ಪ ತಿಂಗಳ ರಾಯರು ಮೊದಲಾದವರು ಗಾಂಧಿ ಮಂಗಳೂರು ಪೇಟೆಗೆ ಆಗಮಿಸುತ್ತಿರುವುದನ್ನು ತಿಳಿಸಿದರು. ಆಗ ಊರಿಗೆ ಊರೇ ಆಸಕ್ತಿ ಕುತೂಹಲ ಬೆರಗುಗಳಿಂದ ಗಾಂಧಿಯನ್ನು ನೋಡಲು ಹೊರಡುತ್ತಾರೆ.

ಗಾಂಧಿ ತಮ್ಮ ಭಾಷಣದಲ್ಲಿ ಮುಖ್ಯವಾಗಿ ಪ್ರಸ್ತಾಪಿಸುವುದು ಅಸಹಕಾರ ಚಳುವಳಿಯನ್ನು ಹೇಗೆ ಮಾಡಬೇಕೆಂಬುದು ಅದಕ್ಕಾಗಿ ಮಾಡಬೇಕಾದ ಕೆಲಸಗಳು ಇಂತಿವೆ. ಬ್ರಿಟಿಷ್ ಸರ್ಕಾರ ಕೊಡುವ ಬಿರುದುಗಳನ್ನು ಆತ್ಮಾಭಿಮಾನವುಳ್ಳ ಪ್ರತಿಯೊಬ್ಬರೂ ತಿರಸ್ಕರಿಸಬೇಕು. ಪರಿಶುದ್ಧವಾದ ನ್ಯಾಯ ಕೊಡದ ಪರಂಗಿಯರವರ ಕೋರ್ಟ್‌ಗಳಿಗೆ ಬಹಿಷ್ಕಾರ ಹಾಕಬೇಕೆಂದು ಸರಕಾರಿ ಶಾಳೆಗಳಿಗೆ ಅಥವಾ ಸರಕಾರದಿಂದ ಹಣ ಪಡೆಯುವ ಶಾಲೆಗಳಿಗೆ ಮಕ್ಕಳನ್ನು ಕಳುಹಿಸಕೊಡದೆಂದೂ ಕೇಳಿಕೊಂಡರು. ಜನರಲ್ಲಿ ಸ್ವದೇಶಿ ಜಾಗೃತಿ ಮೂಡಿಸಲು ಪ್ರಯತ್ನಿಸಿದರು. ಮಂಗಳೂರು ಪ್ರಾಂತ್ಯಕ್ಕೆ ಗಾಂಧಿಜೀಯ ಅಪರಾವತಾರವಾಗಿದ್ದರು. ಕಾರ್ನಾಡು ಸದಾಶಿವರಾಯರು ಇವರು ಶೂದ್ರ ಜನಾಂಗದ ಬೌದ್ಧಿಕ ಸರ್ವಾಧಿಕಾರಿ ಆಗಿದ್ದರು. ನಮ್ಮ ಮನೆಯ ಅಕ್ಕಿಯನ್ನು ನಾವೇ ಬೇಯಿಸಿ ತಿನ್ನೋಣ ಅಪ್ಪು ಬೇಯಿಸಿ ಕೊಟ್ಟು ನಮಗೆ ಮಾರೋದು ಬೇಡ, ಬೇರೆಯವರ ಹಂಗು ನಮಗ್ಯಾಕೆ ಎಂದು ಸರಳವಾಗಿ ಖಾದಿವಸ್ತ್ರವನ್ನು ನಾವೇ ನೂಲು ಧರಿಸಬೇಕು ಎಂಬುದನ್ನು ವಿವರಿಸುತ್ತಿದ್ದರು.

2ನೇ ಬಾರಿಗೆ ಗಾಂಧಿಜೀ ಮಂಗಳೂರಿಗೆ ಬಂದಾಗ ಊರಿನ ಜನರು ಅವರನ್ನು ಅವತಾರ ಪುರುಷ ಎಂಬಂತೆ ಭಾವಿಸಿದರು. ಆದ್ದರಿಂದಲೇ ಬದ್ಧ ವೈರಿಗಳಾದ ಹೆಬ್ಬಾರರ ನೇತೃತ್ವದ ವಿಪ್ರ ಪಡೆಯೂ ಆ ಗಾಂಧಿಯನ್ನು ಒಮ್ಮೆ ನೋಡಿ ಬರುವ ಎಂದು ಹೊರಬಿದ್ದರು. ಗಾಂಧಿ ತಮ್ಮ ಭಾಷಣದಲ್ಲಿ ಹಿಂದೂಗಳು ಮುಸಲ್ಮಾನರು ಒಬ್ಬರ ತಲೆಯೊಬ್ಬರು ಒಡೆಯುತ್ತಿದ್ದಾರೆ. ಹಿಂದೂ-ಮುಸ್ಲಿಂ ವೈಷವ್ಯ ಹೀಗೆ ಮುಂದುವರಿಯಬಾರದು ನಾವೆಲ್ಲರೂ ಭಾರತವೆಂಬ ಸುಂದರ ತೋಟದಲ್ಲಿ ಅರಳಿರುವ ಹೂವುಗಳು ಪರರು ಬಂದು ಈ ತೋಟವನ್ನಾಗಲಿ, ಗುಲಾಬಿಯನ್ನಾಗಲಿ ಹಾಳುಗೆಡವಲು ಬಿಡಬಾರದು ನಮ್ಮ ನಿಮ್ಮೊಳಗಿನ ವೈಷಮ್ಯವನ್ನು ಆದಷ್ಟು ಬೇಗ ತೊಡೆದು ಹಾಕಿ ನಾವು ಮಧುರ ಸಂಬಂಧ ಬಳಸಿಕೊಳ್ಳಬೇಕೆಂದೂ  ಹೇಳಿದರು ಹಿಂದೂ-ಮುಸ್ಲಿಂರ ಸಾಮರಸ್ಯವನ್ನು ಕುರಿತು ಗಾಂಧೀಜಿ ಮಾತನಾಡುತ್ತಿದ್ದರೆ ಕೇಳುತ್ತಿದ್ದ ವಿಪ್ರಪಡೆ ಕುಳಿತಲ್ಲೇ ಕೂರಲಾಗದೆ ಅಸಹನೆಯಿಂದ ಸಿಡಿಮಿಡಿಗೊಂಡರು.

ಖಾದಿಯನ್ನು ಕಡ್ಡಾಯವಾಗಿ ತೊಡಲೇಬೇಕೆಂದಾಗ ಅಲ್ಪ ಬೆಲೆಗೆ ನುಣುಪು ಬಟ್ಟೆ ಸಿಗುವಾಗ ಹೆಚ್ಚಿನ ಹಣತೆತ್ತು ಖಾದಿಕೊಳ್ಳಲು ನಮ್ಮ ಮಂಡೆಯಲ್ಲೀನೊ ಒಣಸಗಣಿ ತೂಬಿದ್ಯಾ ಎಂದು ತಮ್ಮ ತಮ್ಮಲ್ಲೇ ಕುಹುಕವಾಡಿಕೊಂಡರು. ಬ್ರಾಹ್ಮಣರ ಮೌಢ್ಯತೆಗಳನ್ನು ತಿದ್ದುಬೇಕಾದರೆ ಇನ್ನೊಂದು ಜನ್ಮವೆತ್ತಿ ಬರಬೇಕೆಂಬುದು ಇವರನ್ನು ನೋಡಿದಾಗ ಸತ್ಯವೆನಿಸುತ್ತದೆ. ಆದರೆ ಇದೇ ಜನಾಂಗದವರಾದ ಕಾರ್ನಾಡು ಸದಾಶಿವರಾಯರು ವ್ಯಕ್ತಿತ್ವ ಘನತೆ ತರುವಂಥದ್ದಾಗಿದೆ. ಮನೆತನಕ್ಕಾಗಿ ಮೈ ಬಗ್ಗಿಸಿ ದೇಹ ದಂಡಿಸಿ ದುಡಿದ ಜೀವವಿದು. ಅವರಿಗೆ ದೀರ್ಘಕಾಲದಿಂದ ಬೆನ್ನುನೋವಿನ ಕಾಯಿಲೆಯಿರುವುದರಿಂದ ಬೆಳಗ್ಗೆಯಿಂದ ಶ್ರೀ ನಾರಾಯಣ... ಹರಿನಾರಾಯಣ ಎನ್ನುತ್ತಲೆ ದೇವರ ಕೋಣೆಯಲ್ಲಿ ಕೂತು ಬೆನ್ನುನೋವಿಗೆ ಮುಕ್ತಿ ಕೋರುತ್ತಾ ಆಗ್ಗಾಗ್ಗೆ ದೀರ್ಘ ನಿಟ್ಟುಸಿರು ಬಿಡುತ್ತಿದ್ದರು.

ಹಾಗೇ ನೋಡಿದರೆ ಅಂಮುಣಿಯಮ್ಮನ ಮಡಿರೋಗ ಸೊಸೆ ರುಕುಣಿಯಮ್ಮನೆಷ್ಟು ಬೀಕರವಾದುದಲ್ಲ : ಭೀಭತ್ಸವಾದುದಲ್ಲ ಅಂಮುಣಿಯಮ್ಮನೇನಾದರೂ ಶೂದ್ರ ಮಕ್ಕಳಿಂದ ಅಥವಾ

ಇತರ ಅನಿಷ್ಟವುಗಳಿಂದ ಮಡಿ ಕೆಡಿಸಿಕೊಂಡರೆ ನೇರವಾಗಿ ದೇವರ ಕೆರೆಯಲ್ಲಿ ಮುಳುಗೆದ್ದು ಮೈಲಿಗೆಯಾದ ವಸ್ತುಗಳನ್ನು ಕೆರೆಯಲ್ಲಿ ಮುಳುಗಿಸಿ ತೆಗೆದು ನಾರಾಯಣ ನಾರಾಯಣ ಎಂದು ನಾಕ್ಕೈದು ಬಾರಿ ಕೂಗುತ್ತಾ ಮೌನವಾಗಿ ಮಿಂದು ಬಂದರೆ ಅಲ್ಲಿಗೆ ಮುಗಿಯುತ್ತದೆ. ಅವರ ಮಡಿಯಾಟ ಆದರೆ ರುಕಣಿಯಮ್ಮನದು ಹಾಗಲ್ಲ. ಮಡಿಕೆಡಿಸಿದವರಿಗೆ ಏಳೇಳು ಜನ್ಮಕ್ಕೆ ಸಾಲದಷ್ಟು ಬೈದಾಡಿ ಕನಿಷ್ಠ ಎರಡು ಗಂಟೆ ನೀರಲ್ಲಿ ಮುಳುಗೇಳುತ್ತಾ ಮತ್ತೆರಡು ದಿನ ಶೂದ್ರರ ನೆರಳು ಕಾಣದಂತೆ ಎಚ್ಚರ ವಹಿಸುತ್ತಾರವರು ಅಥವಾ ಶೂದ್ರರೇ ಆ ಕೊಳಕು ಆ ಕೊಳಕು ಒಡಲ ಬ್ರಾಮಣ್ಸಿಯ ಬೈಗಳಿಗೆ ಹೆದರಿ ಆ ಕಡೆ ತಲೆ ಹಾಕಿ ಮಲಗುವುದಿಲ್ಲ.

ಈ ಮೇಲಿನ ಪಾತ್ರಗಳಲ್ಲದೇ ಇನ್ನಿತರ ಪಾತ್ರಗಳು ಸಹ ಕಾದಂಬರಿಯುದ್ದಕ್ಕೂ ಮೇಲಿಂದ ಮೇಲೆ ಕಂಡುಬರುತ್ತದೆ ಮತ್ತೆ ಕೆಲವು ಪಾತ್ರಗಳು ಹಾಗೇ ಬಂದು ಹೀಗೆ ಹೋಗುತ್ತವೆ ಮುಂಡಾಲರು, ಮುಗೇರರು,  ಕೊರಗರು, ಪೂಜಾರರು ಮೂಲ್ಯರು, ಮೈಲಿಗಳ ಜಾತಿಗೆ ಸೇರಿದ ಆಳುಮಕ್ಕಳ ಪಾತ್ರಗಳು ಕಾದಂಬರಿಯಲ್ಲಿ ಕಂಡುಬರುವುದಲ್ಲದೆ 'ಕರಿಯ' ಎಂಬ ನಾಯಿಯ ಪಾತ್ರವು ಕಂಡು ಬರುತ್ತದೆ. ಹಾಗೂ ಇ ಪಾತ್ರಗಳಲ್ಲೂ ಸಹ ಗಂಡು-ಹೆಣ್ಣೆಂಬ ಪಾತ್ರಗಳು ಕಂಡು ಬರುತ್ತವೆ. ಈ ಪಾತ್ರಗಳು ಹೆಬ್ಬಾರರ ಮನೆಯ ಆಳುಗಳು ಪಾಂಡುಶೆಟ್ಟರ ಮನೆಯ ಆಳುಗಳು ಆಗಿದ್ದು, ಅವರೊಂದಿಗೆ ಕ್ಷಾರಿಕ ಮಾಬಲ ಆಚಾರಿಗಳಾದ ಶ್ಯಾಮಚಾರಿ, ಸೇನಾಚಾರಿ, ಮಡಿವಾಳ ಸಿದ್ದು ಮುಂತಾದ ಪಾತ್ರಗಳು ಕಂಡು ಬರುತ್ತದೆ.

ಸೀನಪಯ್ಯ  ಹೆಬ್ಬಾರ ಮನೆಯ ಆಳುಮಕ್ಕಳಾದ ಕೂಸುಮೈಲಿ, ಆತನ ಪತ್ನಿ ಸೇಸಿ ಅಂತಪ್ಪ ಹಾಗೂ ಅವನ ಪತ್ನಿ ಸರಸು ಅಂಗರಮೂಲ್ಯ ಹಾಗೂ ಅವನ ಪತ್ನಿ ಗಂಗು ಇವರಲ್ಲದೆ ಕುಳ್ಳೈಗುತ್ತಿನ ಪಾಂಡುಶೆಟ್ಟರ ಮನೆತನದ ಆಳುಗಳಾದ ಮಂಜಪ್ಪ ಪಜಿನ ಮೂಲ್ಯದೊಂಬ ಪೂಜಾರಿಗಳಲ್ಲದೆ ಹೆಬ್ಬಾರರ ಮನೆಯ ಮೂಲಗೇಣಿಗಾರ ಪಾಂಚಪೂಜಾರಿ ಅಣುಶೆಟ್ಟಿ ಅಚ್ಚಶೆಟ್ಟಿ ದೇವುಪೂಜಾರಿ ಕೊರಗನ ಪಿತು ಆತನ ಪತ್ನಿ ಬೈಯ್ಯು ವತುವಿನ ಅಳಿಯ ಪೊತ್ಪೆಲ ಮುಂತಾದ ಹಲವು ಪಾತ್ರಗಳು ಗಾಂಧಿ ಬಂದ ಕಾದಂಬರಿಯಲ್ಲಿ ಕಂಡು ಬರುತ್ತವೆ ಹಾಗೂ ಈ ಕಾದಂಬರಿಗೆ ಪೂರಕವಾಗಿದೆ ಇವು.

## ಅಧ್ಯಾಯ – 4

### ಕಾದಂಬರಿಯ ವಸ್ತು ವಿನ್ಯಾಸ ವಿಶ್ಲೇಷಣೆ

ಗಾಂಧಿ ಬಂದ ಕಾದಂಬರಿಯು 20ನೇ ಶತಮಾನದ ಕೊನೆಯ ದಶಕದ ಅಂತ್ಯದಲ್ಲಿ ಕಂಡುಬಂದಿರುವ ಒಂದು ಮಹತ್ವದ ಕಾದಂಬರಿಯಾಗಿದೆ. ಈ ಕಾದಂಬರಿಯನ್ನು ರಚಿಸಿರುವುದು ಒಬ್ಬ ಲೇಖಕಿ ಎನ್ನುವುದು. ವಿಶೇಷವಾಗಿದ್ದು ಇದೇ ಇವರ ಮೊದಲ ಕಾದಂಬರಿ ಎನ್ನುವುದನ್ನು ಸಹ ಗಮನಿಸಬೇಕಾದ ಅಂಶವಾಗಿದೆ. ರಾಷ್ಟ್ರೀಯ ವಿದ್ಯಮಾನಗಳನ್ನು ಅತ್ಯಂತ ಕೆಳಮಟ್ಟದಲ್ಲಿ ಅಂದರೆ ಸ್ಥಳೀಯ ಅಥವಾ ಗ್ರಾಮೀಣ ಮಟ್ಟದಲ್ಲಿ ಹೇಳುತ್ತಾ ಹೋಗಿರುವುದು ಸೋಜಿಗವೆನಿಸುತ್ತದೆ.

ವರ್ಗಸಂಘರ್ಷ, ವರ್ಣಬೇದ, ಅಸ್ಪೃಶ್ಯತೆ, ಲಿಂಗತಾರತಮ್ಯ ಸನಾತನ ಧರ್ಮದ ನೀತಿನಿಯಮಗಳು ಸ್ವಾತಂತ್ರ್ಯ ಹೋರಾಟ ಹಾಗೂ ಅದರ ಭಾಗವಾದ ಚಳುವಳಿಗಳು ಇಂತಹ ವಿಸ್ತಾರವಾದ ವಿಷಯಗಳೆಲ್ಲವನ್ನೂ ಸಹ ಒಂದೇ ಕಾದಂಬರಿಯಲ್ಲಿ ತುಳುನಾಡಿನ ಸಾಂಸ್ಕೃತಿಕ ಆಚರಣೆಯ ಹಿನ್ನಲೆಯಲ್ಲಿ ಹೇಳುತ್ತಾ ಹೋಗಿರುವುದು ಲೇಖಕಿಯ ಪ್ರತಿಭಾಶಕ್ತಿಗೆ ಹಿಡಿದಿರುವ ಕನ್ನಡಿಯಾಗಿದೆ.

ಇಲ್ಲಿ ಲೇಖಕಿಯ ಪರಿವರ್ತನೆಯ ಸಂಕೇತವಾಗಿ "ಗಾಂಧಿಬಂದ" ಶೀರ್ಷಿಕೆಯನ್ನು ಇಟ್ಟುಕೊಂಡು ನಿರ್ಮಿಸಿರುವ ಕಾದಂಬರಿಯಲ್ಲಿ ಬದಲಾವಣೆಯನ್ನು ಹೇಳುತ್ತಾರೆ.

ಈ ಬದಲಾವಣೆಯು ಕಾದಂಬರಿಯಲ್ಲಿ ಕಂಡುಬರುವ ಪಾತ್ರಗಳ ಮನಸ್ಸಿನಿಂದಲೇ ಮೂಡಿಸಿರುವುದು ಒಂದು ವೈಶಿಷ್ಯ ಪೂರ್ಣವಾದ ಅರ್ಥಗರ್ಭಿತವಾದ ವಿಷಯವಾಗಿದೆ. ಇಂತಹ ಬೃಹತ್ ಕಾದಂಬರಿಯು ಹಲವು ಪರಿಕಲ್ಪನೆಯನ್ನು ಒಳಗೊಂಡಿದೆ. ತುಳುನಾಡಿನ ಸಂಸ್ಕೃತಿಯನ್ನು ಎಲ್ಲರಿಗೂ ಪರಿಚಯಿಸಿಕೊಡುವುದು. ಪ್ರಾಚೀನವಾದ ಸನಾತನ ಧರ್ಮದ ರೀತಿ ರಿವಾಜುಗಳು ಹಾಗೂ ಅದರ ಪ್ರಭಾವ ಮತ್ತು ಇತಿಮಿತಿಗಳನ್ನು ಚರ್ಚಿಸುವುದು ವರ್ಗಸಂಘರ್ಷದ ಚಿತ್ರಣವನ್ನು ಧಾರ್ಮಿಕವಾಗಿ ರಾಜಕೀಯವಾಗಿ, ಮಾನವೀಯ ನೆಲೆಯಲ್ಲಿ ನೋಡುವುದು ಸ್ವಾತಂತ್ರ್ಯವಾಗಿ ನಡೆದ ಚಳುವಳಿ ಗಾಂಧಿಜೀಯ ತತ್ವಗಳು ಇವೆಲ್ಲವುಗಳು ಬೀರಿದ ಪ್ರೇರಣೆಯಿಂದ ಜನರಲ್ಲಿ ಮೂಡಿದ ಜಾಗೃತಿಯನ್ನು ತಿಳಿಸುವುದು ಅಥವಾ ಬದಲಾವಣೆಯನ್ನು ಗುರ್ತಿಸುವುದು. ಈ ಕಾದಂಬರಿಯ ಪ್ರಮುಖ ಪರಿಕಲ್ಪನೆಗಳಾಗಿವೆ. ಈ ಎಲ್ಲ ವಿಷಯಗಳನ್ನು ಸಾಮಾಜಿಕ ದೃಷ್ಟಿಕೋನದಿಂದ ಗಮನಿಸಿದಾಗಾದ ಬದಲಾವಣೆಗಳನ್ನು ಅಥವಾ ಬದಲಾವಣೆಗೆ ಒಳಗಾಗುತ್ತಿರುವ ಸನ್ನಿವೇಶಗಳನ್ನು ಈ ಕಾದಂಬರಿಯಲ್ಲಿ ನೋಡುತ್ತಾ ಅವು ಎಷ್ಟರ ಮಟ್ಟಿಗೆ ಸಫಲವಾಗಿವೆ ಎಂಬುದನ್ನು ಮುಂದಿನಂತೆ ವಿಶ್ಲೇಷಿಸಬಹುದಾಗಿದೆ.

ಗಾಂಧಿಬಂದ ಕಾದಂಬರಿಯ ಒಳಹೂರಣವನ್ನೆಲ್ಲಾ ಪ್ರಧಾನವಾಗಿ ತುಳುನಾಡಿನ ಸಾಂಸ್ಕೃತಿಕ ಆಚರಣೆಗಳನ್ನು ಹಿಡಿದಿಟ್ಟಿವೆ. ಆದ್ದರಿಂದ ಇಂದೊಂದು "ತುಳುನಾಡಿನ ಸಾಂಸ್ಕೃತಿಕ ಆತ್ಮಕಥನ" ಎಂದು ಸ್ವತಃ ಲೇಖಕಿಯೇ ತಮ್ಮ ಮುನ್ನುಡಿಯಲ್ಲಿ ಬರೆದುಕೊಂಡಿದ್ದಾರೆ. ಕಥೆಯ ಪ್ರಾರಂಭದಲ್ಲಿ ಕಂಬಳದೊಂದಿಗೆ ಶುರುವಾದ ಆಚರಣೆಯ ಕಥೆಯ ಕೊನೆಗೂ ಕಂಬಳದೊಂದಿಗೆ ಮುಕ್ತಾಯವಾಗುತ್ತದೆ.

ಈ ನಡುವೆ ಕಂಬಳ, ಕೋಳಿಕಟ್ಟಿ, ಕೋಲ ಅಳಿಯಕಟ್ಟು, ಸಂತಾನ ಪೈಶುಗಳ ಸೀಮಂತದೂಟ, ಆಟಿ ಅಮಾವಾಸ್ಯೆ ಮದ್ದು ಜನಿವಾರದ ನೂಲು ಬದಲಿಸುವ ಸಡಗರ, ಮಾರಿಪೂಜೆ, ಬೆಸ್ತರ ಕೂಟದ ಜರಂದಾನು ನೇಮ ಕಂಗಿಲ ಕುಣಿತ ಜರಂದಾಯ ನೇಮ ಹೀಗೆ ಹಲವು ರೀತಿಯ ಆಚರಣೆಗಳು ಕಾದಂಬರಿಯೊಳಗೆ ಬಹುವಿಸ್ತಾರವಾಗಿ ಕಂಡು ಬಂದಿದೆ. ಇಲ್ಲಿ ಆ ಹಬ್ಬಗಳ ವಿಶೇಷತೆಯನ್ನು ಅದರ–ಸಾದಕ–ಬಾಧಕಗಳೊಂದಿಗೆ ತಿಳಿಸಿದ್ದಾರೆ. ಅದರಲ್ಲಿ ಇಲ್ಲಿ ಜಾತಿಗನುಗುಣವಾಗಿ ಆಯಾ ಪಂಗಡಕ್ಕೆ ಮೀಸಲಾದ ಹಬ್ಬಗಳ ಆಚರಣೆಯನ್ನು ಕಾಣಬಹುದು. ಒಂದು ವೇಳೆ ಹಬ್ಬವು ಎಲ್ಲರಿಗೂ ಸೇರಿ ಆಚರಿಸುವುದಾದರೆ ಜಾತಿಯ ನಿಯಮ ಮೀರದೆ ವಿಧಿಸಿರುವ ಸಂಪ್ರದಾಯ ಪ್ರಕಾರ ಹಬ್ಬಗಳನ್ನು ಆಚರಿಸಬೇಕಾಗಿದೆ. ಇಲ್ಲಿ ಜಾತಿ ಪ್ರತಿಷ್ಠೆ, ಮೇಲ್ವರ್ಗದ ಮನೆತನದ ಗೌರವವೇ ಮುಖ್ಯವಾಗಿದ್ದು ಮಾನವೀಯ ಸಂಬಂಧಕ್ಕೆ ಬೆಲೆ ಇಲ್ಲದ್ದನ್ನು ಕಾಣಬಹುದು.

ಇದಕ್ಕೆಲ್ಲ ಪ್ರಮುಖ ಕಾರಣ ಸನಾತನ ಧರ್ಮದ ರೀತಿ ರಿವಾಜುಗಳು ಪರಂಪರಾಗತವಾಗಿ ಬಂದ ಆಚರಣೆಗನುಸಾರವಾಗಿ ಬ್ರಾಹ್ಮಣರು ಇತರ ವರ್ಗದವರು ಕೀಳು, ನಮ್ಮನ್ನು ಸ್ಪರ್ಶಿಸಲು ಅವರಿಗೆ ಆದಕಾಶವಿಲ್ಲ. ಎಲ್ಲರಿಗಿಂತ ನಾವು ಮೇಲು ಎನ್ನುವ ಅಹಮಿಕೆ ಒಂದೆಡೆಯಾದರೆ ಅವರ ಧರ್ಮದಲ್ಲೂ ಸಹ ಇರುವ ನ್ಯೂನ್ಯತೆಗಳನ್ನು ಬಹಳ ಅರ್ಥವತ್ತಾಗಿ ಕಾದಂಬರಿ ಎಳೆ ಎಳೆಯಾಗಿ ಬಿಡಿಸುತ್ತಾ ಸಾಗುತ್ತದೆ. ದ್ರೌಪದಿಯ ಹೀನಾಯ ಸ್ಥಿತಿಗೆ ಹೆಬ್ಬಾರರ ಅಹಂಕಾರಕ್ಕೆ ರುಕುಣಿಯಮ್ಮನ ಅತಿಯಾದ ಕುರುಡು ಸಂಪ್ರದಾಯಕ್ಕೆ ಈ ಸನಾತನ ಧರ್ಮವೇ ಕಾರಣವೆಂದೂ ತಿಳಿಯಬಹುದು. ಈ ಧರ್ಮದ ಅನ್ವಯ ಇತರ ವರ್ಗದ ಜೀವನ ಶೋಷಣೆಗೆ ಒಳಪಟ್ಟಿರುವುದನ್ನು ಕಾದಂಬರಿಯ ಕೊನೆಯವರೆಗೂ ಸಹ ಬಹಳ ಸುಂದರವಾಗಿ ಹೇಳುತ್ತಾ ಸಾಗುತ್ತದೆ.

ಸನಾತನ ಧರ್ಮದ ಪ್ರಕಾರ ಕೊಟ್ಟಿದ ಮೇಲ್ವರ್ಗದ ಜನರ ಮಾತಿಗೆ ಕೆಳವರ್ಗದ ಜನ ಹೆದರುವುದರಿಂದಲೇ ಅವರ ಮೇಲೆ ನಿರಂತರ ದೌರ್ಜನ್ಯ ಬಹಳ ಹಿಂದಿನಿಂದಲೂ ಜರುಗಿದೆ. ಎನ್ನುವ ಹಲವು ಸಾಕ್ಷಿಗಳಿಗೆ ಈ ಕಾದಂಬರಿ ಸಾಕ್ಷಿಯಾಗಿದೆ. ಧಾರ್ಮಿಕವಾಗಿ ಶೈಕ್ಷಣಿಕವಾಗಿ ರಾಜಕೀಯ ಮತ್ತ್ಯಾವುದೇ ರೀತಿಯಲ್ಲೂ ಸಹ ಮುಂಡಾಲರು, ಮುಗೇಶರು ಕೊರಗರು ಪೂಜಾರಿಗಳು ಮೈಲಿಗಳು ಹೀಗೆ ಮುಂತಾದ ಪ್ರತಿಯೊಬ್ಬರೂ ಸಹ ಮನುಸ್ಮೃತಿಯನ್ವಯ ಯಾವುದೇ ಸಮಾನತೆ ಹಕ್ಕುಗಳಿಲ್ಲದೆ ಮೇಲ್ವರ್ಗದವರ ಮನೆಯ ಗುಲಾಮರಾಗಿ ಬದುಕುದನ್ನು ಇಲ್ಲಿ ಕಾಣಬಹುದು. ಆದರೆ ಕೆಳವರ್ಗದ ಜನರೂ ಸಹ ಒಗ್ಗಟ್ಟಿಲ್ಲದೆ ನಾವು–ಮೇಲು, ನೀವು–ಕೀಳು ಎಂಬ ವರ್ಗತಾರತಮ್ಯ ಮಾಡುವ ಪರಿಯನ್ನು ಬಹಳ ಸಹಜವಾಗಿಯೇ ಇಲ್ಲಿ ಕಾಣಬಹುದು. ಆದರೆ ದೇವ ಪೂಜಾರಿಯ ಪ್ರಕಾರ ಹಾಗೂ ಪೊತ್ತೆಲನ ಪ್ರಕರಣಗಳ ಸಂದರ್ಭದಲ್ಲಿ ಅವರ ನಡುವೆ ಏರ್ಪಡುವ ಸಹಾಯ ನೀಡುವ ಮನೋಭಾವ ಎಲ್ಲಕ್ಕಿಂತ ಮಾನವೀಯ ಜಾತಿಯ ಮೇಲೆಂದೂ ಸಾರುವುದನ್ನು ಒಳಾರ್ಥವಾಗಿ ಗಮನಿಸಬೇಕು.

ಇಲ್ಲಿ ಕಂಡುಬರುವ ಹಾಗೂ ತಿಳಿಯಬೇಕಾಗಿರುವ ಮತ್ತೊಂದು ವಿಷಯ ತಾರತಮ್ಯ ಇಲ್ಲಿ ಸ್ತ್ರೀ–ಪುರುಷರಿಬ್ಬರೂ ಸಹ ತಾರತಮ್ಯಕ್ಕೆ ಒಳಗಾಗಿರುವುದನ್ನು ಕಾಣಬಹುದು. ದ್ರೌಪತಿ ಸನಾತನ

ಧರ್ಮದ ರೀತಿ–ನಿಯಮಕ್ಕೆ ಬಲಿಯಾದರೆದಾರು ತನ್ನದಲ್ಲದ ತಪ್ಪಿಗೆ ಶಿಖಂಡಿ ಪಟ್ಟಹೊತ್ತು ಸಮಾಜದಿಂದ ವಿಮುಖಳಾಗಿರುವುದನ್ನು ಕಾಣಬಹುದು. ಅಳಿಯಕಟ್ಟು ಸಂತಾನದ ಪ್ರಕಾರ ಗುತ್ತಿನ ಸಂಪ್ರದಾಯದಲ್ಲಿ ಗಂಡು ಮಕ್ಕಳಿಗೆ ಅಧಿಕಾರವಿಲ್ಲ. ಅವರು ಕೇವಲ ಯಜಮಾನಿಕೆ ವಹಿಸಿಕೊಳ್ಳಬೇಕೆ ಹೊರತು ಅಧಿಕಾರ ನಡೆಸುವಂತಿಲ್ಲ. ಇಲ್ಲಿ ಸಮಾಜದಲ್ಲಿರುವ ಭಿನ್ನತೆಯನ್ನು ಆಯಾ ಜಾತಿಗೆ ಅನುಗುಣವಾಗಿ ಕಾಣಬಹುದು.

ಇದಲ್ಲದೇ ತುಳುನಾಡಿನ ಪಾರಂಪಾರಿಕ ತಿನಿಸುಗಳನ್ನು ಸಹ ಕಾಣಬಹುದು. ಮೂಡೆ ಕುಡು–ಅರಿ ಕೋಳಿಪುಂಡಿ ಹೀಗೆ ಹಲವಾರು ವಿವಿಧ ತಿನಿಸುಗಳನ್ನು ಯಾವ ಯಾವ ಸಂದರ್ಭದಲ್ಲಿ ಯಾವ ರೀತಿ ತಯಾರಿಸುತ್ತಾರೆ. ಎಂಬುದನ್ನು ಸಹ ತಿಳಿಯಬಹುದು. ಆದರೆ ಅದನ್ನು ತಯಾರಿಸುವಲ್ಲಿ ಕೆಳವರ್ಗದ ಜನರ ಸಹಾಯಪಡೆಯುವ ಮೇಲ್ವರ್ಗದವರು ಅದನ್ನು ಸವಿಯಲು ಅವರಿಗೆ ನೀಡದಿರುವುದು ಮಾತ್ರ ವಿಷಾದಕರ ಇವರುಗಳು ತರುವ ವಸ್ತುಗಳನ್ನು ಬೆಳೆಯುವ ಬೆಳೆಯನ್ನು ಉಪಯೋಗಿಸುವ ಮೇಲ್ವರ್ಗದ ಜನ ಅವರೊಂದಿಗೆ ಸಹಪಂಕ್ತಿಯ ಭೋಜನಕ್ಕೆ ಮಾತ್ರ ನಿರಾಕರಿಸುವುದನ್ನು ಯಾವ ರೀತಿಯಿಂದಲೂ ಸಹ ಒಪ್ಪಲಾಗುವುದಿಲ್ಲ. ಸನಾತನ ಧರ್ಮದ ಆಧಾರದಿಂದ ಸಾವಿರಾರು ವರ್ಷದಿಂದ ಯಾವುದೇ ರೀತಿಯ ಶೈಕ್ಷಣಿಕ ಧಾರ್ಮಿಕ, ಸಾಮಾಜಿಕ, ರಾಜಕೀಯ ಹಕ್ಕುಗಳಿಲ್ಲದೆ ಪ್ರಾಣಿಗಿಂತಲೂ ಸಹ ಹೀನಾಯ ಜೀವನ ನಡೆಸುತ್ತಿರುವ ಕೆಳವರ್ಗದ ಜನರ ಬದುಕು–ಬವಣೆಗಳನ್ನು ಮೇಲ್ವರ್ಗದವರಿಗೆ ಇವರು ನೀಡುವ ಗೌರವ ವಿಧೇಯತೆಯನ್ನು ಬಹಳ ಅಚ್ಚುಕಟ್ಟಾಗಿ ಇಲ್ಲಿ ಗಮನಿಸಬಹುದು. ಇಂತಹ ಸಾಮಾಜಿಕ ವೈರುಧ್ಯಗಳ ನಿವಾರಣೆಗಾಗಿಯೇ ಬುದ್ಧ, ಬಸವಣ್ಣ, ಪುರಂದರದಾಸರು, ಕನಕದಾಸರು, ಸರ್ವಜ್ಞ ಮುಂತಾದ ಹಲವು ಮಹನೀಯರು ತಮ್ಮ ಅಭಿಪ್ರಾಯವನ್ನು ತಿಳಿಸಿದ್ದಾರೆ. ಆದರೆ ಕೆಲವರು ಇದಕ್ಕೂ ಜಗ್ಗದೆ ಜಾತಿಪದ್ಧತಿಯನ್ನು ಸದೃಡಗೊಳಿಸಲು ಯತ್ನಿಸಿದ್ದಾರೆ. ಇದೊಂದು ವಿಷಾದಕರ ಸಂಗತಿ ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ಸಮಾನತೆಗಾಗಿ ಜ್ಯೋತಿಭಾಪುಲೆ ರಾಜಾರಾಂಮೋಹನ್‌ರಾಯ್, ಅಂಬೇಡ್ಕರ್ ಅಲ್ಲದೆ ಹಲವರು ಪ್ರಯತ್ನಿಸಿದ್ದಾರೆ ಹಾಗೆಯೇ ಮತ್ತೊಬ್ಬ ಮಹತ್ವದ ಸ್ಥಾನ ಪಡೆಯುವವರು. ಮಹಾತ್ಮಗಾಂಧೀಜಿ ಇವರು ತಮ್ಮ ಅಹಿಂಸಾ ತತ್ವದ ಮೂಲಕ ಇಡೀ ಭಾರತದಾದ್ಯಂತ ಚಲಿಸಿ ತಮ್ಮ ತತ್ವವನ್ನು ಹರಡಿ ಸ್ವಾತಂತ್ರ್ಯವಾಗಿ ಜನರನ್ನು ಸಂಘಟಿಸಿದರು. ಇದರ ಪರಿಣಾಮವಾಗಿಯೇ ಕಾರ್ನಾಡು ಸದಾಶಿವರಾಯರು ಮಾರಪ್ಪ, ತಿಂಗಳಾಯರು, ಅದ್ರಾಮನಂತಹ ಪ್ರಬಲ ಪಾತ್ರಗಳು ಇಲ್ಲಿ ಕಂಡು ಬಂದಿವೆ. ಗಾಂಧಿಜೀಯು ಮಂಗಳೂರು ಪೇಟೆಗೆ ಬರುತ್ತಾರೆ. ಎನ್ನುವ ವಿಚಾರದಿಂದಲೇ ನಡೆಯುವ ಬದಲಾವಣೆಯನ್ನು ಹಾಗೂ ಜನರಲ್ಲಿ ಮೂಡುವ ಭಾವನೆಗಳನ್ನು ಕಾಣಬಹುದಾಗಿದ್ದು, ಗಾಂಧಿಯನ್ನು ಅನುಸರಿಸುವ ಕೆಳವರ್ಗದವರು ಹಾಗೂ ಅವರನ್ನು ವಿರೋಧಿಸುವ ಮೇಲ್ವರ್ಗದವರನ್ನು ಕಾಣಬಹುದು. ಗಾಂಧಿಜೀಯ ಪ್ರಭಾವಕ್ಕೊಳಗಾಗಿ ಮಾರಪ್ಪ, ಶಿಖಂಡಿ, ದಾರುವಿನ ಕೈಹಿಡಿದರೆ ಅದ್ರಾಮನು ವಿಧವೆ ದ್ರೌಪದಿಯನ್ನು ಪುನರ್ವಿವಾಹವಾದನು. ಹಾಗೂ ಮಾರಪ್ಪ ಮತ್ತು ತಿಂಗಳಾಯರು ಜೊತೆಗೂಡಿ ಸಹಪಂಕ್ತಿ ಭೋಜನವನ್ನು ನಡೆಸಿದ್ದು ಸನಾತನ ಧರ್ಮದ ಬೃಹತ್ ಮರಕ್ಕೆ ಬಿದ್ದ ಬಲವಾದ ಕೊಡಲಿ ಪೆಟ್ಟಾಗಿದೆ.

ಇದಲ್ಲದೆ ಖಾದಿ ಪ್ರಚಾರ ಉಪ್ಪಿನ ಸತ್ಯಾಗ್ರಹ, ಪರದೇಶಿ ವಸ್ತ್ರ, ಬಹಿಷ್ಕಾರ, ಮಧ್ಯಪಾನ ನಿಷೇದ ಚಳುವಳಿ ಇವುಗಳಿಂದ ಜನರಲ್ಲಿ ಸ್ವಾತಂತ್ರ್ಯಯದ ಬಗ್ಗೆ ಆಲೋಚನೆ ಹಾಗೂ ಕಿಚ್ಚು ಮೂಡಿತಲ್ಲದೆ ಸಮಾನತೆಯ ಅರಿವು ಸಹ ಮೂಡಲು ಕಾರಣವಾಯಿತು. ಇದರಿಂದ ಜನರಲ್ಲಿ ರಾಷ್ಟ್ರೀಯ ಭಾವೈಕ್ಯತೆಯನ್ನು ಸ್ಥಳೀಯ ಮಟ್ಟದಿಂದಲೇ ಮೂಡಲು ಈ ಚಳುವಳಿಗಳಿಂದ ಉಂಟಾದ ಪ್ರೇರಣೆ ಪ್ರಭಾವವನ್ನು ಕಾಣಬಹುದು.

ಹೆಬ್ಬಾರರ ಕಠೋರತನ ನೈತಿಕವಿಲ್ಲದ ಜೀವನ, ದುರ್ಬಲ ವರ್ಗದವರನ್ನು ಶೋಷಿಸುವ ಪರಿ ಹಣದಾಸೆ ಮತ್ತು ತನ್ನ ಬ್ರಾಹ್ಮಣಜಾತಿಯ ಶ್ರೇಷ್ಟತೆಗೆ ಎಂತಹವರನ್ನು ಸಹ ತುಳಿಯುವ ಹುನ್ನಾರವನ್ನು ಇಲ್ಲಿ ಗಮನಿಸಬಹುದಾಗಿದ್ದರೆ ಇಂತಹ ಷಡ್ಯಂತ್ರ ಕುತಂತ್ರಗಳ ವಿರುದ್ಧ ಹೋರಾಡಲು ಗಾಂಧಿಜೀಯ ಹಿಂಬಾಲಕರಾದ ಮಾರಪ್ಪ ತಿಂಗಳಾಯರು ಕರ್ನಾಡರು ಅದ್ರಾಮ ಮೊದಲಾದವರು ಹೆಬ್ಬಾರರ ವರ್ತನೆಯನ್ನು ಟೀಕಿಸಿ ಸಮಾಜದ ಬದಲಾವಣೆಗೆ ಕಾರಣರಾಗುವರು ಆದರೆ "ನಾಯಿಬಲ ಯಾವತ್ತಿದ್ದರೂ ಡೊಂಕೆ" ಎಂಬ ಮಾತಿನಂತೆ ಹೆಬ್ಬಾರರು ಮಾತ್ರ ಬದಲಾಗುವುದಿಲ್ಲ. ಇದು ಅವರ ಸಣ್ಣತನವನ್ನು ತೋರಿಸುತ್ತದೆ. ಆದರೆ ಸಹ ಪಂಕ್ತಿ ಭೋಜನ ಪಿತು ಅಹಿಂಸೆಯನ್ನು ಪಾಲಿಸುವುದು. ಶಿಖಂಡಿ ದಾರು ಹಾಗೂ ವಿಧವೆ ದ್ರೌಪದಿಯನ್ನು ಕ್ರಮವಾಗಿ ಮಾರಪ್ಪ ಮತ್ತು ಅದ್ರಾಮ ಮದುವೆಯಾಗುವುದು ಸ್ವಾತಂತ್ರ್ಯ ಪೂರ್ವ ಚಳುವಳಿಗಳು ಮತ್ತು ಭಾಗವಹಿಸುವುದು. ಗಾಂಧಿನಿಧಿಗೆ ನಗನಾಣ್ಯ ನೀಡುವುದು ಮುಸ್ಲಿಂ ಬಾಂಧವ ಅದ್ರಾಮ ಸತ್ತಾಗ ಹಿಂದೂ ವಿಧಿ ವಿಧಾನ ಸಹಿತ ಬೊಜ್ಜ ನೆರವೇರಿಸುವುದು. ಈ ರೀತಿ ಹಲವು ಸಾಮಾಜಿಕ ಬದಲಾವಣೆಗಳ ಹಿನ್ನಲೆಯಲ್ಲಿ ಕಾದಂಬರಿಯನ್ನು ವಿಶ್ಲೇಷಿಸಬಹುದು ಹಾಗೂ ಸಂಕ್ಷಿಪ್ತವಾಗಿ ಈ ಮುಂದಿನಂತೆ ಕಥಾ ಭಾಗವನ್ನು ನೋಡಬಹುದು.

ಊರಿನ ಮುಖಂಡರಾಗಿ ಕಾಣಿಸಿಕೊಂಡಿರುವ ಪಟೇಲ ಸೀನಪ್ಪಯ್ಯ ಹೆಬ್ಬಾರರು ಜಾತಿಯಿಂದ ಬ್ರಾಹ್ಮಣರಾಗಿದ್ದು ಆರ್ಥಿಕವಾಗಿ ಬಲಿಷ್ಠರಾಗಿದ್ದು ಸಾಮಾಜಿಕವಾಗಿ ಕೂಡ ಬ್ರಾಹ್ಮಣರಿಂದ ಹಿಡಿದು ಶೂದ್ರರವರೆಗೆ ಗೌರವಧಾರಗಳಿಗೆ ಒಳಗಾಗಿದ್ದಾರೆ. ಆದರ ಸೀನಪ್ಪಯ್ಯ ಹೆಬ್ಬಾರರು ಮಾತ್ರ ಧೂರ್ತವ್ಯಕ್ತಿಯಾಗಿದ್ದು ಯಾವ ಜಾತಿಯವರನ್ನು ಹೇಗೆ ಬಳಸಿಕೊಳ್ಳಬೇಕೆಂದೂ ತಿಳಿದಿರುವ ಕಪಟಿ, ಸಮಯ ಸಾಧಕ, ಕುತಂತ್ರಿ ಮೋಸವನ್ನು ಹೀಗಾಗಿ ಈ ಕಥಾಭಾಗದ ಖಳನಾಯಕನಾಗಿ ಇಲ್ಲಿ ಕಂಡು ಬರುತ್ತಾರೆ. ಇವರ ಮೋಸವನ್ನು ಜನರು ತಿಳಿದಿದ್ದರೂ ಸಹ ಎದುರು ಹಾಕಿಕೊಳ್ಳುವ ಸಾಮರ್ಥ್ಯವಿಲ್ಲ. ಇಂತಹ ಹೆಬ್ಬಾರರ ಮನೆಯವರು ಸಹ ಸಂಪ್ರದಾಯಶೀಲರಾಗಿದ್ದು ಈ ಹಿನ್ನಲೆಯಲ್ಲಿ ಕಟ್ಟಿದ್ದು ಕುರುಡರಂತೆ ವರ್ತಿಸುತ್ತಾರೆ. ಹೆಬ್ಬಾರರಿಗೆ ಧರ್ಮವೇ ಉಸಿರಾಗಿದೆ. ಅವರು ಧರ್ಮವನ್ನು ಎಂದು ಮೀರುವುದಿಲ್ಲ. ಇಂತಹ ವ್ಯಕ್ತಿತ್ವದ ಹಿನ್ನಲೇ ಇರುವುದರಿಂದಲೇ ಒಳನಾಯಕನಾಗಿ ಈ ಕಾದಂಬರಿಯಲ್ಲಿ ಮೂಡಿ ಬಂದಿದ್ದಾರೆ.

ಹೆಬ್ಬಾರರಿಗೆ ಪತ್ನಿ ರುಕುಣಿಯಮ್ಮ ಮಗಳು ದ್ರೌಪದಿ ಮಗ ಹಯವದನ ಇದ್ದಾರೆ. ಆದರೆ ವಿಧಿನಿಯಮ ಮಗಳು ಮದುವೆಯಾದ ಕೆಲವೇ ತಿಂಗಳಲ್ಲಿ ವಿಧವೆಯಾಗಿದ್ದಾಳೆ. ಪತ್ನಿ ರುಕುಣಿಯಮ್ಮ

ಕಟ್ಟಾ ಸಂದ್ರದಾಯಸ್ಥೆಯಾಗಿದ್ದಾಳೆ. ಆದರೆ ಜಾತಿಯಿಂದ ಕೀಳಾದ ಮುಸ್ಲಿಂ ಪಂಗಡದ ಆದ್ರಾಮನು ತನ್ನ ಮಗಳು ದ್ರೌಪದಿಯನ್ನು ಇಷ್ಟಪಡುತ್ತಿರುವ ವಿಷಯ ತಿಳಿದು ಹೆಬ್ಬಾರರು ಇವರರಿಬ್ಬರನ್ನು ಬೇರ್ಪಡಿಸಲು ನಡೆಸಲು ಚಿಂತನೆ ಹಾಗೂ ಆದ್ರಾಮನನ್ನು ಮುಗಿಸುವ ಆಲೋಚನೆಯನ್ನು ಸಹ ಮಾಡುತ್ತಾರೆ. ಇದರಿಂದ ತಿಳಿಯುವ ಮತ್ತೊಂದು ಪ್ರಮುಖಾಂಶ ಎಂದರೆ ಈ ಕಾದಂಬರಿಯಲ್ಲಿ ಅದ್ರಾಮನು ನಾಯಕನಾಗಿ ದ್ರೌಪದಿ ನಾಯಕಿಯಾಗಿ ಕಂಡು ಬರುತ್ತಾಳೆ. ಹೆಬ್ಬಾರರಿಗೆ ಮಗಳು ಅಂತರ್ಜಾಲ ಯುವಕನೊಂದಿಗೆ ಸಂಭಾಷಿಸುತ್ತಿರುವ ಸನ್ನಿವೇಶ ಕಂಡು ಕುಸಿದು ಬೀಳುತ್ತಾರೆ. ಪುಟ್ಟಮ್ಮಕ್ಕ ಹೆಬ್ಬಾರರ ಸ್ನೇಹಿತನ ಪತ್ನಿಯಾಗಿದ್ದು ಸ್ನೇಹಿತ ನಾರಾಯಣಭಟ್ಟರು ಕೆಲಸದ ನಿಮಿತ್ತ ಪತ್ನಿಯ ಕಾವಲಾಗಿರುವಂತೆ ಹೇಳಿ ಕೇರಳಕ್ಕೆ ಹೋಗಿದ್ದಾರೆ. ತನ್ನ ಮಗಳು ಮುಸ್ಲಿಂ ಯುವಕನೊಂದಿಗೆ ಸಂಭಾಷಿಸುವುದರಿಂದ ಸನಾತನ ಧರ್ಮದ ರೀತಿ–ನೀತಿಗೆ ಹಾಗೂ ಊರಿನ ಪ್ರತಿಷ್ಠೆಯ ಮನೆಯಾದ ಸುರಗಿಮಠಕ್ಕೆ ಅಪಚಾರವಾಗುವುದೆಂದೂ ಆಕೆಯನ್ನು ಬಂಧಿಸಿಡುತ್ತಾರೆ. ಆದರೆ ಸ್ವತಃ ಹೆಬ್ಬಾರರ ಪುಟ್ಟಮ್ಮಕ್ಕನಿಗೆ ನಾಕುಬಾರಿ ಹೊಟ್ಟೆ ಬರಿಸಿದ್ದಾರೆ.

ಇಲ್ಲಿ ಗಮನಿಸಬೇಕಾದ ಒಂದು ವಿಷಯವೆಂದರೆ ತನ್ನ ಧರ್ಮದ ಘನತೆಗೆ ಕುಂದುಂಟಾಗುತ್ತದೆಂದೂ ಮಗಳನ್ನು ಬಂಧಿಸುವ ಹೆಬ್ಬಾರರು ಪರಪುರುಷನ ಪತ್ನಿಯೊಂದಿಗೆ ಸ್ವತಃ ಬಂದಿತರಾಗುವುದು ಎಷ್ಟರ ಮಟ್ಟಿಗೆ ಸರಿ ಹಾಗೂ ಹೆಬ್ಬಾರರಿಗೆ ಪಟೇಲಿಕೆ ನಡೆಸಲು ಯಾವ ನೈತಿಕತೆ ಇದೆ ಎಂಬುದನ್ನು ತಿಳಿಸುತ್ತದೆ.

ಇಲ್ಲಿ ಒಂದೇ ಜಾತಿಯವರೊಂದಿಗೆ ಇಂತಹ ಅನಾಚಾರಗಳನ್ನು ಎಸಗಬಹುದು. ಆದರೆ ಬೇರೆ ಜಾತಿಯರೊಂದಿಗೆ ಮಗಳ ಸಂಭಾಷಿಸುವುದು ಹೆಬ್ಬಾರರಿಗೆ ನುಂಗಲಾರದ ತುಪ್ಪವಾಗಿದೆ. ಇಂತಹ ನೀಚ ಕಠೋರ ಮನಸ್ಸಿನ ಹೆಬ್ಬಾರರು ಪುಟ್ಟಮ್ಮಕ್ಕನಿಗೆ ಜನಿಸಿದ ಮಗುವನ್ನು ನೀರಿಗೆ ಎಸೆಯುವುದನ್ನು ಕಂಡಾಗ ನನ್ನ ಸ್ವಾರ್ಥ ಕೆಲಸಕ್ಕೆ ಮತ್ತು ತನ್ನ ಮರ್ಯಾದೆಗೆ ಅವಮಾನವಾದರೆ ತಾನು ಎಂತಹ ಕೀಳು ಮಟ್ಟಕ್ಕಾದರೂ ಇಳಿಯುತ್ತೇನೆಂದೂ ತಿಳಿಸುವುದಕ್ಕೆ ಈ ಸನ್ನಿವೇಶ ಸಾಕ್ಷಿಯಾಗಿವೆ. ನಂತರ ಪುನಃ ನಾಳೆ ಮುಂಜಾನೆಯೇ ಕುಳ್ಳುಗುತ್ತಿನ ಪಾಂಡುಶೆಟ್ಟಿಯನ್ನು ಕಂಡು ಸುರಗಿಮಠದ ಮಾನ ಮಾರ್ಯದೆಗೆ ಕುಂದುಂಟಾಗಬಹುದಾದ ವಿಚಾರವನ್ನು ಹೇಳಿ ಆತನಿಂದ ಸಹಾಯಹಸ್ತ ಯಾಚಿಸಲೇ ಅಥವಾ ಪ್ರಸೊಡಿಯ ಗುರಿಕಾರ ಪೂವಮರಕಾನನ್ನು ಕರೆಸಿ ತನ್ನ ಧರ್ಮಸಂಕಟವನ್ನು ವಿವರಿಸಲೇ? ಹೆಬ್ಬಾರರನ್ನು ಇಂತಾ ದ್ವಂದ್ವವೊಂದು ಕಾಡಲು ಕಾರಣ ಇವರಿಬ್ಬರೊಳಗೂ ಅವರಿಗೆ ಸಂಪೂರ್ಣ ನಂಬಿಕೆಯಿಲ್ಲ, ವಿಶ್ವಾಸವಿಲ್ಲ ಇವರಿಬ್ಬರೂ ಅಂತಾ ಜೀವ ಹೋಗುವ ಕಾಲಕ್ಕೆ ನನ್ನನ್ನು ಬದುಕಿಸಬಹುದಷ್ಟೆ, ಆದರೆ ನಂತರ ಇಡೀ ಬ್ರಾಹ್ಮಣ ಕುಲದ ತೇಜೊವಧೆ ಮಾಡುವಾಗ ಈ ಅವಕಾಶ ಘಟನೆಯನ್ನು ಬಳಿಸಿಕೊಳ್ಳುವ ಸಂಪೂರ್ಣ ಸಾಧ್ಯತೆಯಿದೆ ಎಂಬ ಅಪನಂಬಿಕೆ–ಭಯ ಹೆಚ್ಚಾರಾಗಿದೆ. ಇದಲ್ಲದೆ ಗುತ್ತಿನ ಶೆಟ್ಟರು ಈ ವಿಚಾರದಲ್ಲಿ ಯಾರ ಪರ ಕೊಡೆ ಹಿಡಿಯುತ್ತಾರೆಂದೂ ಹೇಳಲಾಗದು. ಬ್ರಾಹ್ಮಣರೆಂದರೆ ಶೆಟ್ಟರಿಗೆ ಅಷ್ಟಕ್ಕಷ್ಟೆ ಬ್ರಾಹ್ಮಣ ಕುಲವನ್ನು ಬುಡದಿಂದಲ್ಲೇ ಕತ್ತರಿಸಿ ಹಾಕಬೇಕೆಂದೂ ಎಷ್ಟೋ ಬಾರಿ ಬ್ರಾಹ್ಮಣರಿಂದ ವಿಶ್ವಾಸಘಾತುಕನ ನಡೆದಾಗ ಬಹಿರಂಗವಾಗಿ ಅವರು ಮಾತಡಿದ್ದಿದೆ. ಆದರೆ ಕೆಲವೊಮ್ಮೆ

ಗುತ್ತಿನ ಪೂಜೆ ಪುರಸ್ಕರ, ನಾಗದರ್ಶನ, ಕೋಲನೇಮಗಳ ಕಾಲದಲ್ಲಿ ಬ್ರಾಹ್ಮಣೋತ್ತಮರನ್ನು ಚೆನ್ನಾಗಿ ಗೌರವಿಸಿ ನಡೆಸಿಕೊಳ್ಳುವುದೂ ಇದೆ. ಶೆಟ್ಟರ ಮನಸ್ಸಿನಲ್ಲಿ ಬ್ರಾಹ್ಮಣರಿಗೆ ಯಾವ ಸ್ಥಾನವಿದೆ ಎಂಬುದನ್ನು ಇದುವರೆಗೂ ಹೆಬ್ಬಾರರಿಂದ ಅರ್ಥೈಸಲಾಗಿಲ್ಲ. ಅದ್ರಾಮನ ವಿಚಾರದಲ್ಲಂತೂ ಗುತ್ತಿನ ಶೆಟ್ಟರು ಯಾರ ಪರ ವಾಲಬಹುದು ಎನ್ನುವುದು ಹೆಬ್ಬಾರರಿಗೆ ಖಾತ್ರಿಇಲ್ಲ. ಗುತ್ತಿನ ಶೆಟ್ಟರಿಗೆ ಸಣ್ಣ ಕೆಲಸಕ್ಕೆ ಹೋಗಲು ಸಹ ಆ ಸಾಬಿಯ ಜಟಲಾಗಾಡಿಯೇ ಬೇಕು : ಅದ್ರಾಮನೆಂದರೆ ಶೆಟ್ಟರಿಗೆ ಅಷ್ಟೊಂದು ಇಷ್ಟ ಹಾಗಿದ್ದಲ್ಲಿ ಅವರು ಅದ್ರಾಮನ ಕೃತ್ಯವನ್ನು ಮಟ್ಟಹಾಕುತ್ತಾರೋ ಇಲ್ಲವೋ ಎಂಬ ಅನುಮಾನ ಹೆಬ್ಬಾರರಿಗೆ, ಶೆಟ್ಟರೇನಾದರೂ ಮನಸ್ಸು ಮಾಡಿ ಯಾರನ್ನದಾರೂ ಮಟ್ಟಹಾಕಬೇಕೆಂದೂ ತೀರ್ಮಾನಿಸಿದರೆ ಮುಗಿಯಿತು. ಮತ್ತೆ ಆತ ಜೀವಂತ ಹೆಣವಾಗಿ ದಿನದೂಡಬೇಕಷ್ಟೆ, ಆದರೆ ಶೆಟ್ಟರು ಅಂತಾ ತೀರ್ಮಾನಕ್ಕೆ ಕೈಹಾಕುವ ಮುನ್ನ ದೈವಗಳ ನೆಲೆಯಾದ ಗುತ್ತಿನ ಚಾವಡಿಯಲ್ಲಿ ಕೂತು, ಮೊದಲಿಗೆ ವಿವಾದದ ಪೂರ್ವಾಪರಗಳನ್ನು ಬಗೆದು ನೋಡುತ್ತಾರೆ. ತಪ್ಪಿತಸ್ಥರನ್ನು ಕರೆದು ಕಿವಿ ಮಾತು ಹೇಳಿ ಬದುಕು ಹೋಗು ಎಂದು ಕಳುಹಿಸಿಕೊಡುತ್ತಾರೆ. ಮತ್ತು ಅದೇ ತಪ್ಪು ಮಾಡಿದೆನೆಂದಾದರೆ ಆತ ಜೀವನಪರ್ಯಾಂತ ಶೆಟ್ಟರನ್ನು ನೆನಪಿಸಿಕೊಂಡೇ ಇರುವಂತಾ ಸ್ಥಿತಿಗೆ ತಳ್ಳಿಬಿಡುತ್ತಾರೆ. ಅದರ ದೈವ ಚಾವಡಿಯಲ್ಲಿ ನ್ಯಾಯಾವೂ ಇದೆ, ಶಿಕ್ಷೆಯೂ ಇದೆ ಹೀಗೆ ಶೆಟ್ಟರ ಪಾತ್ರವಿನ್ಯಾಸವನ್ನು ಏಳೆಯಾಗಿ ತೆರೆದಿಡುವ ಸನ್ನಿವೇಶ ಬಂದಾಗ ಪೂರ್ಣವಾಗಿ ವಿವರಿಸುವ ಅಂಶವು ಕಾದಂಬರಿಯುದ್ಧಕ್ಕೂ ಹೇಳುತ್ತಾ ಸಾಗಿದೆ.

ನಂತರ ಪುನಃ ಅದ್ರಾಮನ ನೆನಪಾಗಿ ಆತನನ್ನು ಮುಗಿಸಲು "ಗುತ್ತಿನ ಶೆಟ್ಟರನ್ನು" ಹಾಗೂ ಬೆಸ್ತರ ಗುರಿಕಾರ ಪೂವಮರಕಾಲಿನ ಸಹಾಯವನ್ನು ಬೇಡಲು ಚಿಂತಿಸಿ ಸುಮ್ಮನಾದರು ಕಾರಣವೆಂದರೆ, ಇಬ್ಬರೂ ಸಹ ತಮ್ಮ ಸಮಯ ಬಂದರೆ ತನ್ನ ಬ್ರಾಹ್ಮಣ ಸಮುದಾಯವನ್ನು ಟೀಕಿಸಲು ಈ ವಿಷಯವನ್ನು ಬಳಸಿಕೊಂಡರೆ ಅಥವಾ ಇಬ್ಬರಿಗೂ ಮದುವೆ ಮಾಡಿಸಿಬಿಡಿ ಎಂದರೆ ಏನುಮಾಡುವುದೆಂದೂ ತಿಳಿದು ಚಿಂತಿತರಾದಾಗ ತನ್ನ ತಂದೆ ಹೇಳುತ್ತಿದ್ದ ಮಾತುಗಳು ಹೆಬ್ಬಾರರಿಗೆ ನೆನಪಾಗುತ್ತಿದ್ದವು.

"ನಮ್ಮ ತೋಟದ ಬೇಲಿ ಭದ್ರ ಇದ್ರೆ ಪುಂಡುಹೋರಿ ಹ್ಯಾಗೆ ನುಗ್ಗಯತ್ತೋ" ಎಂಬ ಅನುಭವದ ಮಾತನ್ನು ನೆನೆದು ಹೌದು ? ನಮ್ಮ ಬೇಲಿ ಗಟ್ಟಿ ಮಾಡುವುದೇ ಸಮ ಎಂಬ ತೀರ್ಮಾನಕ್ಕೆ ಬಂದರು.

ಹೆಬ್ಬಾರರ ತಂದೆಯ ಮಾತುಗಳು ನೂರಕ್ಕೆ ನೂರರಷ್ಟು ಸತ್ಯ. ಆದರೆ ಹೆಬ್ಬಾರರಿಗೆ ತಂದೆ ಮಾತಿನ ಒಳಾರ್ಥ ತಿಳಿಯದೆ ಮಗಳನ್ನು ಬಂಧಿಸಿದರು. ಬದಲಾಗಿ ಆಕೆಯ ಮನಸ್ಸನ್ನು ಬಂಧಿಸಲು ವಿಫಲರಾಗುವುದನ್ನು ಮನಗಾಣಬಹುದು. ಏಕೆಂದರೆ, ಮನಸ್ಸು ಹರಿಯುವ ನೀರಿನಂತೆ ಬೀಸುವ ಗಾಳಿಯಂತೆ ಅದಕ್ಕೆ ಎಂದೂ ಸಹ ಬಂಧನವಿಲ್ಲವೆಂಬುದು ಹೆಬ್ಬಾರರಿಗೆ ಹೇಗೆ ತಾನೇ ತಿಳಿಯಬೇಕು.

ಮರುದಿನ ಹೆಬ್ಬಾರರು ಪೂಕರೆಕಂಬ ನೆಟ್ಟ ಕಂಬಳದ ಗದ್ದೆ ಕೆಲಸಕ್ಕೆ ತನ್ನ ಮನೆಯ ಆಳುಗಳು ಬರದಿರುವುದನ್ನು ಕಂಡು ಅವರ ಕೇರಿಗೆ ಹೋಗುವರು ಇದನ್ನರಿತ ಅಂತಪ್ಪ ತನ್ನ ಪತ್ನಿ ಸರಸುವನ್ನು ಚೆನ್ನಾಗಿ ಬಯ್ಯುವನು ಇದನ್ನು ಕೇಳಿ ಹೆಬ್ಬಾರರೇ ಸುಮ್ಮನಾಗುವರು ಹಾಗೂ ಮುಟ್ಟಾದ ಹೆಂಗಸರು ಗದ್ದೆಗೆ ಬೇಡ ಹಾಗೂ ಗಂಡಸರು ಸಹ ನಾಳೆ ಮಧ್ಯಾಹ್ನ ಕೋಳಿ ಕಟ್ಟಕ್ಕೆ ಹೋಗಿ ಎನ್ನುವರು ಅಂತಪ್ಪನಿಗೆ ಮಾರಪ್ಪನನ್ನು ನನ್ನ ಕಾಣಲು ಹೇಳು ಎಂದು ಹೊರಡುವರು. ಇಲ್ಲಿ ಹೆಬ್ಬಾರರ ಆಳುಮಕ್ಕಳಾದ ಅಂತಪ್ಪ ಕೂಸಮ್ಮೈಲಿ, ಅಂಗುರಮೂಲ್ಯ ಇವರೆಲ್ಲರೂ ಸಹ ತನ್ನ ಒಡೆಯನ ಮನೆಯ ವಿಪರೀತ ಕೆಲಸದಿಂದ ಬೇಸತ್ತಿರುವುದನ್ನು ಕಾಣಬಹುದು. ಇದಕ್ಕಾಗಿ ಮೈಗಳ್ಳ ಅಂತಪ್ಪ ಹೂಡಿದ ನೆಪದಿಂದ ಹೆಂಗಸರು ಹಾಗೂ ಗಂಡಸರು ದೊರೆತ ವಿಶ್ರಾಂತಿಯಿಂದ ನೆಮ್ಮದಿ ಕಾಣವುದು ಸಹ ಕೆಳವರ್ಗದ ಜನರ ಮೇಲೆ ವಿಪರೀತ ಕೆಲಸ ನೀಡಿ ಶೋಷಿಸುವುದನ್ನು ಕಾಣಬಹುದು.

ನಂತರ ಕೋಳಿಕಟ್ಟದಲ್ಲಿ ಸೋತ ಮಂಜಪ್ಪ ಬಟ್ಟೆಯಾಗಿ ಅಳುತ್ತಾ ಇಡಿ ಕೋಳಿಕಟ್ಟವನ್ನು ನಿಂದಿಸುತ್ತಾ ನಡೆದು ಬರುವಾಗ ಅದ್ರಾಮನು ತನ್ನ ಗಾಡಿಯಲ್ಲಿ ಅವನನ್ನು ಕರೆದುಕೊಂಡು ಗುತ್ತಿನ ಚಾವಡಿಗೆ ಬರುವರು ಬಂದವನೆ ಗಾಡಿಯಿಂದ ಇಳಿದು ಅಳುತ್ತಾ ಒಡೆಯನ ಕಾಲಿಗೆರಿದನು. ಪರಿಸ್ಥಿತಿ ಅರಿತ ಶೆಟ್ಟರು ಬೈದು ನಾಳೆಯಿಂದ ಮುಂದಿನ ಸಂಕ್ರಾತಿಯವರೆಗೆ ನೂರು ನೂರು ಮರಿಗೆ ಹೆಚ್ಚು ನೀರನ್ನು ಕೊಳಲ್ಲೆ ಗದ್ದೆಗೆ ಮೊಗಚಬೇಕು ತಿಳಿತಾ ? ಎಂದರು ನಂತರ ಅದ್ರಾಮನು ದಾರಿಯಲ್ಲಿ ಮಾರಪಶೆಟ್ಟಿ ಸುರುವಿಬಿಟ್ಟ ಗಾಂಧಿಬರುವ ವಿಚಾರವನ್ನು ಶೆಟ್ಟರಿಗೆ ತಿಳಿಸಿದನು.

ಅದ್ರಾಮನನ್ನು ಸಾತ್ವಿಕದಾರಿಯಿಂದ ಮುಗಿಸಲು ಮಾರಪ್ಪ ಶೆಟ್ಟಿಯ ಸರಿ ಎಂದೆನಿಸಿದ್ದ ಹೆಬ್ಬಾರರ ಮನೆಗೆ ಮಾರಪ್ಪಗೆ ಬಂದಾಗ ತನ್ನ ಸುರಗಿಮಠದ ಮಾನ ಕಾಪಾಡಲು ನಿನ್ನ ಸಹಾಯಬೇಕೆಂದು ದ್ರೌಪದಿ ಅದ್ರಾಮನ ವಿಷಯ ಹೇಳಿದರು. ಮಾರಪ್ಪ "ನೀವು ಈ ತೋಡಿನ ನೀರು ಕಡಲು ಸೇರದ ಹಾಗೇ ಮಾಡಲು ಯಾವ ಉಪಾಯ ಮಾಡಬಹುದೋ ಅದನ್ನು ಮಾಡಿ ಬಿಡಿ" ಎಂದನು. ಇದರಿಂದ ಹೆಬ್ಬಾರರು ಕುಪಿತರಾದಾಗ ಮಾರಪ್ಪನು "ಹೆಬ್ಬಾರರೇ ನಿಮ್ಮ ಶಾಸ್ತ್ರದಲ್ಲಿ ಕಾಮ ಪರಿಹಾರಕ್ಕಾಗಿ ಯಾವುದಾದರೂ ಮಂತ್ರ ಹೇಳಿದ್ದಾರಾ ? ಎಂದು ಬ್ರಾಹ್ಮಣ್ಯದ ಮೂಲಕ್ಕೆ ಕೊಳ್ಳಿ ಇಡುವಂತಹ ಒಂದು ಚಿಕ್ಕ ಪ್ರಶ್ನೆ ಎಸೆದನು ಹೆಬ್ಬಾರರು ಮತ್ತೆ ಜಗಲಿಯ ದಿಡ್ಡೆಯ ಮೇಲೆ ಕುಸಿದು ಕುಳಿದರು.

ಮಾರಪ್ಪಶೆಟ್ಟಿ ಗಾಂಧಿ ವಿಚಾರದಿಂದ "ಖಾದಿ ತನ್ನ ಹೆಂಡತಿ" "ದೇಶವೇ ನನ್ನ ತಾಯಿ" ಎಂದು ತಿಳಿದು ಸ್ವರಾಜ್ಯಕ್ಕಾಗಿ ಹೋರಾಡುತ್ತಿದ್ದಾನೆ. ಅಲ್ಲದೆ ಆತ ದ್ರೌಪದಿಯನ್ನು ಪುನಃ ಮುತ್ತೈದೆಯಂತೆ ನೋಡಬೇಕೆಂಬ ಹಂಬಲವನ್ನು ಹೊಂದಿದ್ದಾನೆ. ಇದರಿಂದಲ್ಲೇ ಆತ ಗೆಳೆಯನ ಅದ್ರಾಮನ ಕಾರ್ಯವನ್ನು ಮೆಚ್ಚಿ ಹೆಬ್ಬಾರರ ಪ್ರಶ್ನೆಗೆ ಸೂಚ್ಯವಾಗಿ ಬಹಳ ಅರ್ಥವತ್ತಾಗಿ ಉತ್ತರ ನೀಡುತ್ತಾನೆ. ಹರಿಯುವ ನೀರು ಯಾವತ್ತಿದ್ದರೂ ಸಹ ಅದು ಸೇರುವುದು ಕಡಲನ್ನೇ ಹಾಗೆಯೇ ದ್ರೌಪದಿ ಅದ್ರಾಮನ ಸ್ವಂತವೆಂದು ನೆನೆದು ಅವರನ್ನು ಸೇರದಿರಲು ನೀವು ಏನನ್ನು ಮಾಡಿದರೂ ನಿಷ್ಪಯೋಜಕ ಎಂದು ಮಾರ್ಮಿಕವಾಗಿ ನುಡಿದನು. ಅಲ್ಲದೆ ಹೆಬ್ಬಾರರ ಕೋಪವನ್ನು ಸಹ ತಿಳಿದು ಪ್ರಕೃತಿ ಸಹಜ ಬಯಕೆಗಳಿಗೆ ಶಾಸ್ತ್ರದಲ್ಲಿ ಯಾವುದೇ ರೀತಿಯ ಪರಿಹಾರವಿಲ್ಲವೆಂಬುದನ್ನು ಪ್ರಶ್ನೆ ಮಾಡಿ ಕೇಳುತ್ತಾನೆ.

ಹೌದು ಪ್ರಕೃತಿ ಸಹಜ ಆಸೆ-ಆಕಾಂಕ್ಷೆಗಳನ್ನು ಯಾರು ತಡೆಯಲು ಸಾಧ್ಯವಿಲ್ಲ. ಹೀಗಾಗಿ ಯಾವುದೇ ಶಾಸ್ತ್ರ, ಧರ್ಮ, ಪುರಾಣಗಳಲ್ಲೂ ಸಹ ಇದಕ್ಕೆ ಪರಿಹಾರವಿಲ್ಲ. ದ್ರೌಪದಿಯ ತಲೆಯನ್ನೇನೋ ಬೋಳಿಸಿದರು. ಆದರೆ ಆಕೆಯ ನೈಸರ್ಗಿಕ ಜೀವನದ ಒತ್ತಡಗಳನ್ನು ಮಾತ್ರ ಅವರು ಬೋಳಿಸಲಾರದು.

ಬೋಳಿಸಿದಂತೆಲ್ಲಾ ಮತ್ತೆ ಮತ್ತೆ ಚಿಗುರಿ ಬೆಳೆದ ಕೂದಲಂತೆಯೇ ಆಕೆಯೊಳಗೆ ಚಿಗುರಿ ಬರುವ ಬಯಕೆ ಭಾವನೆ ಹಂಬಲಗಳನ್ನು ಅದುವಿಡುವ ಶಕ್ತಿ ಆ ಎಳೆಯ ಜೀವಕ್ಕೆ ಇಲ್ಲವಾಯಿತು. ಆದರೆ ಹೆಬ್ಬಾರರು ಮತ್ತು ರುಕುಣಿಯಮ್ಮನ ಬಿಗಿಕಾವಲಿನಿಂದ ಹಾಗೂ ಅವರ ಹಿಂಸೆಯಿಂದ ರೋಸಿಹೋದ ದ್ರೌಪದಿ ಧರ್ಮವನ್ನು ದಿಕ್ಕರಿಸಿ ಅನ್ಯಧರ್ಮಿಯನ ಜೊತೆ ಪರಾರಿಯಾಗಲು ನಿರ್ಧರಿಸಿದಳು.

ಇಂತಹದೆ ಸನ್ನಿವೇಶ ಮತ್ತೊಂದು ಕಂಡು ಬರುತ್ತದೆ. ಅದು ದಾರುವಿನ ಜೀವನದಲ್ಲಾದ ಒಂದು ದುರಂತವಾಗಿದೆ. ಜಾರಿಗೆ ಬೆಟ್ಟಿನ ಸುಬ್ಬಯ್ಯಶೆಟ್ಟರ ಮಗಳಾದ ದಾರು ಅತೀವ ಸುಂದರಿಯಗಿದ್ದಾಳೆ. ಮಾರಪ್ಪ ಮನೆಗೆ ಬಂದಾಗ ತನ್ನ ತಾಯಿ ದಾರುವನ್ನು ಕುರಿತು ಆಕೆ ಶಿಖಂಡಿಯಂತೆ ಎಂದು ಹೇಳಿದಾಗ ಆತನಿಗೆ ಸಿಡಿಲೆರಗಿತು. ಸುರಸುಂದರಿಯಾದ ದಾರು ಮನೆ ಹೊರಗೆ ಕೂರಲಿಲ್ಲ ಎಂದು ಚಿಂತಿತರಾಗಿ ಪೇಟೆ ವೈದ್ಯರ ಬಳಿ ತೋರಿಸಿದಾಗ ಈಕೆಗೆ ಗರ್ಭಕೋಶವಿಲ್ಲ ಎಂದರೆ ಬೊಗ್ಗು ಪಂಡಿತರು "ವಾ........ ಎಂದು ಶಿಖಂಡಿ ಮಾರಾಯ ! ಹೆಣ್ಣಾಗಿರಬೇಕಾದ್ದೆ ಇಲ್ವಲ್ಲ : ಇವ್ಳಿಗೆ ಎಂದರು. ಈ ವಿಷಯ ಹಳ್ಳಿಯಾದ್ಯಂತ ಹಬ್ಬಿ ಸುಬ್ಬಯ್ಯನ ಮನೆಯವರು ಹೀಯಾಳಿಕೆಯಿಂದ ನರಳಿದರು. ಇದರಿಂದ ನೊಂದ ಆಕೆಯ ತಾಯಿ ಬಾವಿಗೆ ಹಾರಿ ಆತ್ಮಹತ್ಯೆ ಮಾಡಿಕೊಂಡರು ಇದೊಂದು ಕಠಿಣ ಪರಿಸ್ಥಿತಿ ಏಕೆಂದರೆ, ಇಡೀ ಸಮಾಜ ತನ್ನ ಮಗಳಾದ ಸುರಸುಂದರಿ ದಾರುವನ್ನು ಶಿಖಂಡಿ ಎಂದು ಹಂಗಿಸಿರುವುದನ್ನು ಮತ್ತು ಆಕೆ ಪಡುತ್ತಿರುವ ನೋವನ್ನು ಯಾವ ತಾಯಿಯು ಸಹಿಸುವುದಿಲ್ಲ. ಹೀಗಾಗಿ ಆತ್ಮಹತ್ಯೆಯ ಹಾದಿ ತುಳಿದಿದ್ದಾರೆ. ಆದರೆ ದಾರು ದುಃಖವನ್ನು ಹೊರಚಲ್ಲದೆ ಮನಸ್ಸಿನಲ್ಲಿ ಕೊರಗುವ ರೀತಿ ಕಂಡು ಎಲ್ಲರೂ ಕನಿಕರಪಟ್ಟರೆ ಮಾರಪ್ಪ ಆಕೆಯನ್ನು ಮಾಡುವ ಮದುವೆ ಆಗಲು ನಿರ್ಧರಿಸಿ ಗುತ್ತಿನ ಶೆಟ್ಟರ ಬಳಿ ಮತ್ತು ಆದ್ರಾಮನ ಬಳಿ ಹೇಳುವರು ಇವರಂತೂ ಅತೀವ ಸಂತಸಗೊಂಡರು.

ಆದರೆ ಗುತ್ತಿನ ಶೆಟ್ಟರು ಸಹ ವಿಚಾರದ ವಿಮರ್ಶೆಯನ್ನು ಮಾಡಿದರು. ಮಾರಪ್ಪನ ನಿರ್ಧಾರವನ್ನು ಎಲ್ಲಾ ರೀತಿಯಿಂದಲೂ ಪರಿಶೀಲಿಸಿ ಆತನ ದಿಟ್ಟ ನಿರ್ಧಾರವನ್ನು ಪ್ರಶಂಸಿದರು. ಹೌದು ವಿಧವಾ ಪುನರ್‌ವಿವಾಹಕ್ಕೆ ದಾರು ಬಳಗಾಗಿದ್ದರೂ ಆಕೆಯು ಸಹ ಸಮಾಜದಿಂದ ವಿಮುಖಳಾಗಿದ್ದಾಳೆ. ಹೀಗಾಗಿ ಆಕೆಯನ್ನು ಮದುವೆಯಾಗುತ್ತೇನೆಂದು ಮುಂದೆ ಬಂದಿರುವ ಮಾರಪ್ಪ ಆಕೆಯ ಬದುಕಿನ ಬೆಳಕಾಗಿ ಗೋಚರಿಸಿದ್ದಾನೆ. ಗುತ್ತಿನ ಶೆಟ್ಟರು ದಾರುವಿನ ತಂದೆ ಬಳಿ ಮದುವೆ ಪ್ರಸ್ತಾವನೆ ಇಟ್ಟಾಗ ಅವರ ಮೂಕರಾದರೆ ದಾರು ಅಳುತ್ತಿದ್ದಾರೆ. ಅವಳಿಗೆ ಒಂದೆಡೆ ಖುಷಿ, ಮತ್ತೊಂದೆಡೆ ಈ ಸಂತಸ ನೋಡಲು ತಾಯಿ ಇಲ್ಲ ಎಂಬ ನೋವು ಶಿಖಂಡಿಪಟ್ಟ ಹೊತ್ತ ತಾನು ದಾಂಪತ್ಯ ನಡೆಸುವೆನೆಂಬ ಭಯದಿಂದ ಅಳುತ್ತಿದ್ದಾಳೆ. ಈ ನಿರ್ಧಾರದ ಸಾಧಕ ಬಾದಕಗಳನ್ನು ತಿಳಿಸಿ ಹೇಳಿದಾಗ ಮದುವೆಗೆ ದಾರುವಿನ ತಂದೆ ಕಡೆಯಿಂದ ಒಪ್ಪಿಗೆ ದೊರೆಯಿತು.

ಮದುವೆಯ ಸಂದರ್ಭದಲ್ಲಿ ದಾರುವಿನ ಅಂದವನ್ನು ನೋಡಿ ಹಲವರು "ಕೊಳೆತ ಕುಂಬಳಕಾಯಿಗೆ ಕೆಟ್ಟ ತೆಂಗಿನಕಾಯಿ ಜೋಡಿ" ಎಂದು ವ್ಯಂಗ್ಯವಾಡಿದರು. ಆದರೆ ಆಕೆಯನ್ನು ವರಿಸುವುದರಿಂದ ನನ್ನ ಸ್ವರಾಜ್ಯದ ಕನಸನ್ನು ಗಾಂಧಿ ಕನಸನ್ನು ತನ್ನ ತಾಯಿಯ ಆಸೆಯನ್ನು ಸಹ ನೆರವೇರಿಸುವುದರ ಮೂಲಕ ಸಮಾಜದ ಅವಹೇಳನಕ್ಕೆ ಗುರಿಯಾದ ಹೆಣ್ಣುಮಗಳಿಗೆ ಜೀವನ ಕಲ್ಪಿಸಿದ್ದು ಒಂದು ಸಾಮಾಜಿಕ ಕ್ರಾಂತಿಯಾಯಿತು. ಈ ಕ್ರಾಂತಿಗೆ ನಾಂದಿ ಹಾಡಿದ್ದು ಇದೇ ಮಾರಪ್ಪ ಶೆಟ್ಟಿಯಾಗಿದ್ದಾನೆ.

ಎರಡನೆ ಬಾರಿಗೆ ಗಾಂಧೀಜಿ ಮಂಗಳೂರುಪೇಟೆಗೆ ಬಂದಾಗ ಗುತ್ತಿನ ಶೆಟ್ಟರು ದಾರುವಿನ ತಾಯಿಯ ಅಂತ್ಯಕ್ರಿಯೆಯಲ್ಲಿ ಭಾಗವಹಿಸುವ ಸಲುವಾಗಿ ಗಾಂಧೀನಿಧಿಗೆ ನೀಡಲೆಂದು ನಿರ್ಧರಿಸಿದ್ದ ಒಡವೆಗಳನ್ನು ಹೆಬ್ಬಾರರಿಗೆ ನೀಡಿ ಕಾಣಿಕೆ ಸಲ್ಲಿಸಲು ಹೇಳಿದ್ದರು. ಆದರೆ ಹೆಬ್ಬಾರರು ಅದನ್ನು ಗಾಂಧಿಗೆ ನೀಡದೆ ಪುಟ್ಟಮ್ಮಕ್ಕನಿಗೆ ನೀಡಿದ್ದರು. ಜಾರಂದಯ ನೇಮದ ದಿನ ಹೆಬ್ಬಾರರ ಜೊತೆ ಖಾದಿ ಮಳಿಗೆಗೆ ಬಂದ ಪುಟ್ಟಮ್ಮಕ್ಕನ ಮೈಮೇಲಿನ ಒಡವೆ ತಮ್ಮದೆಂದೂ ತಿಳಿದು ಕೋಪಗೊಂಡು ಹೆಬ್ಬಾರರನ್ನು ಮಾನಸಿಕವಾಗಿ ಮುಗಿಸಲು ಸಂಚು ನಡೆಸಿದರು. ಮುಂದೆ ಗುತ್ತಿನ ಶೆಟ್ಟರುಗಳ ಸಹಾಯದಿಂದ ಗುತ್ತಿನ ಚಾವಡಿಯ ಭೂತದೆದುರು ದ್ರೌಪದಿಯ ಕೊರಳಿಗೆ ಅದ್ರಾಮ ತಾಳಿಕಟ್ಟಿದನು. ಈ ಭೀಕರ ಸುದ್ದಿ ಕೇಳಿ ಹೆಬ್ಬಾರರ ಸಮೇತ ಬ್ರಾಹ್ಮಣವರ್ಗ ಕೆರಳಿತು. ಅದ್ರಾಮನ ತಂದೆ ಜಮಾತಿನ ಸದಸ್ಯರೊಂದಿಗೆ ಬುದ್ದಿ ಹೇಳಲು ಬಂದಾಗ "ಪ್ರೀತಿಗೆ ಜಾತಿಯಿಲ್ಲ ಮುಕ್ರಿ ಸಾಹೇಬರೆ ಸಾವಿಗೂ ಜಾತಿಯಿಲ್ಲ" ಎಂದೇಳಿ ಮನೆಯೊಳಗೆ ಹೂಕ್ಕಿದನು ಆದ್ರಾಮ.

ಇಡೀ ಬ್ರಾಹ್ಮಣ ಕುಲವನ್ನೇ ಅಲ್ಲಾಡಿಸಿದ ವಿಷಯ ದ್ರೌಪದಿ ಅದ್ರಾಮನನ್ನು ಪುನರ್ ವಿವಾಹವಾದದ್ದು ಅದು ಸಹ ಅಂತರ್ಜಾತಿ ವಿವಾಹ ಇದರಿಂದ ಸನಾತನ ಧರ್ಮದ ನೀತಿ–ನಿಯಮಗಳು ಗಾಳಿಗೆ ತೂರಲಾರಂಭಿಸಿದವು. ಈ ಮಹಾತ್ಮಗಾಂಧಿಜೀಯ ಪ್ರೇರಣೆ ಪ್ರಭಾವದಿಂದ ಅದ್ರಾಮನು ಈ ಮಹತ್ಕಾರ್ಯಕ್ಕೆ ಮನಸ್ಸು ಮಾಡಿದನು. ಇದರಿಂದ ಬ್ರಾಹ್ಮಣ ವರ್ಗದವರು ಅಧೀರರಾದರು ಈ ವಿಷಯ ಸಾಮಾಜಿಕ ಬದಲಾವಣೆಗೆ ಉದಾಹರಣೆ ಯಾದುದ್ದಲ್ಲದೆ ಸಮಾನತೆಯ ಬೆಳಕಿನ ಕಿಡಿ ಹತ್ತಲು ಸಹಾಯವಾಯಿತು. ಪ್ರೀತಿಗೆದ್ದು ಜಾತಿ ಶ್ರೇಷ್ಟತೆಯನ್ನು ಅನುಸರಿಸುವ ಜಾತಿವಾದಿಗಳಿಗೆ ಈ ಮಾತು ಬಾಣದಂತೆ ಚುಚ್ಚುತ್ತದೆ ಎನ್ನಬಹುದು.

ಇಲ್ಲಿ ಗಮನಿಸಿದಾಗ ಮತ್ತೊಂದು ಪ್ರಮುಖ ವಿಷಯವೆಂದರೆ ಸಹ ಪಂಕ್ತಿ ಬೋಜನವಾಗಿದೆ. ಮಾರಪ್ಪ ಮತ್ತು ತಿಂಗಳಾಯರು ಎಲ್ಲಾ ಜಾತಿಯ ಜನರ ನಡುವೆ ಸಮಾನತೆ ತರಲು ದೇವಾಲಯದೊಳಗೆ ಭೋಜನವನ್ನು ಏರ್ಪಡಿಸಿದರು. ಆದರೆ ಬ್ರಾಹ್ಮಣರು ವಿರೋಧಿಸಿದರೆ ಇತರ ಜಾತಿಗಳ ಜನರು ಉಂಡು ತಾವೇ ಕಿತ್ತಾಡಿಕೊಂಡರು. ಇದರಿಂದ ಬೇಸತ್ತ ಮಾರಪ್ಪ ಮತ್ತು ತಿಂಗಳಾಯರು ಇದಕ್ಕೆ ಸಾಮಾಜಿಕ ಜಾಗೃತಿಯೊಂದೆ ದಾರಿ ಎಂದು ಸುಮ್ಮನಾದನು. ಆದರೆ ಇಲ್ಲಿ ತಿಳಿಯಬೇಕಾದ ವಿಷಯವೆಂದರೆ ಸಾವಿರಾರು ವರ್ಷಗಳಿಂದ ನಡೆದು ಬಂದಿರುವ ಸನಾತನ ಧರ್ಮದ ಸಂಪ್ರದಾಯವನ್ನು ಒಮ್ಮೆಗೆ ಕೆಡುವುದು ಅಸಾಧ್ಯ ಆದರೆ ಆ ನಿಟ್ಟಿನಲ್ಲಿ ಪ್ರಯತ್ನಿಸಿ ಸೋತರೂ ಸಹ ಕೆಳವರ್ಗದ ಜನರಿಗೆ ದೇವಾಲಯದ

ಪ್ರವೇಶವನ್ನು ಹಾಗೂ ಅವರ ನಡುವೆ ಸಹ ಪಂಕ್ತಿ ಭೋಜನವನ್ನು ಏರ್ಪಡಿಸಿ ಮತ್ತೊಂದು ಕ್ರಾಂತಿಗೆ ಮಾರಪ್ಪ & ತಿಂಗಳಾಯರು ಕಾರಣವಾದರು ಇದರಿಂದ ವರ್ಗ ಸಂಘರ್ಷದ ಪ್ರಭಾವ ಪ್ರೇರಣೆ ಕಡಿಮೆಯಾಗುವ ಲಕ್ಷಣವೂ ಕೂಡ ಗೋಚರಿಸತೊಡಗಿತು ಹಾಗೂ ಕೆಳವರ್ಗದ ಜನರಲ್ಲಿ ಒಗ್ಗಟ್ಟಿನ ಜೊತೆಗೆ ಮೇಲ್ವರ್ಗದ ಒಡೆದಾಳುವ ನೀತಿ ಜಾತಿ ಭೇದವನ್ನು ವಿರೋಧಿಸುವ ಕಿಡಿಯೊಂದು ಅವರಲ್ಲಿ ಸಣ್ಣಗೆ ಹತ್ತಿಕೊಂಡಿತು. ಆದರೆ ಆ ವಿಷಯವಾಗಿ ಎಲ್ಲಿಯೂ ಸಹ ಪ್ರತಿಭಟಿಸದಿರುವುದು ಅಥವಾ ಆದರೆ ಈ ವಿಷಯವಾಗಿ ಎಲ್ಲಿಯೂ ಸಹ ಪ್ರತಿಭಟಿಸದಿರುವುದು ಅಥವಾ ಅದರ ಬಗ್ಗೆ ಸಣ್ಣದನಿಯನ್ನು ಸಹ ಎತ್ತದಿರುವುದು ದುರಂತವಾದರೂ ಆ ವಿಷಯವೊಂದು ಸಣ್ಣಗೆ ಪ್ರವಹಿಸಲು ಶುರುಮಾಡುತ್ತಿದೆ.

ತುಳುನಾಡಿನ ಬೃಹತ್ ಸಾಂಸ್ಕೃತಿಕ ಆಚರಣೆಗಳನ್ನು ವಿರೋಧಿಸಿ ಪರಿವರ್ತನೆಯನ್ನು ಬಯಸುವ ಜನರು ಸಹ ಇಲ್ಲಿ ಕಂಡುಬಂದಿದ್ದು ಅವರ ನಡೆಯನ್ನು ವಿಶ್ಲೇಷಸಬಹುದಾಗಿದೆ. ಸೀನಪ್ಪಯ್ಯ ಹೆಬ್ಬಾರರ ಮನೆಯ ಕಂಬಳಕ್ಕೆ ಸಾರುವುದನ್ನು ಬಿಟ್ಟು ಪೊತ್ತೆಲ ಗಾಂಧಿ ನೋಡಲು ಆಗುತ್ತಿಲ್ಲವಲ್ಲ ಎಂದು ಅಳಲು ಶುರುಮಾಡುವನು ಇದಕ್ಕೆ ಕರಗಿನ ಹೆಬ್ಬಾರರ ಮನೆಯ ಆಳುಗಳು ಆತನಿಗೆ ಹೊರಡಲು ಸಹಾಯ ಮಾಡಿ ಹೆಬ್ಬಾರರಿಗೆ ಸುಳ್ಳನ್ನು ಹೇಳುವರು ಗಾಂಧಿಯನ್ನು ನೋಡಲು ಮುಂಡಾಲ, ಮುಗೇರ, ಕೊರಗರು, ಸೇರಿದಂತೆ ಪ್ರತಿಯೊಬ್ಬರು ತೆರಳಿದ್ದಾರೆ. ಇಲ್ಲಿ ಹೆಬ್ಬಾರರ ಮನೆಯ ಕಂಬಳಕ್ಕಿಂತ ದೈವದ ಆಚರಣೆಗಿಂತ ಸಾಮಾಜಿಕ ಜೀವನದಲ್ಲಿ ಬದಲಾವಣೆ ತರಲು ಯತ್ನಿಸುತ್ತಿರುವ ಗಾಂಧಿ ನೋಡಲು ಜನರು ಹಿಂಡಾಗಿ ಹೋಗುತ್ತಾರೆ. ಇವರಿಗೆ ಬೇಕಿರುವುದು ಸಮಾನತೆ ನೆಮ್ಮದಿ ಸಾಮಾಜಿಕ ಸ್ಥಾನಮಾನಗಳಾಗಿವೆ ಎಂಬುದನ್ನು ಈ ಸನ್ನಿವೇಶದಿಂದ ತಿಳಿದು ಬರುತ್ತದೆ.

ಇಂತಹ ಗಾಂಧಿಯವರ ತತ್ವ ಸಿದ್ದಾಂತಗಳ ಪ್ರಭಾವ ಪ್ರೇರಣೆಯಿಂದ ಮಾರಪ್ಪ ತಿಂಗಳಾಯರು, ಕಾರ್ನಾಡರು ಮತ್ತು ಅದ್ರಾಮರು ಸ್ವಾತಂತ್ರ್ಯಕ್ಕಾಗಿ ಜನರನ್ನು ಸಂಘಟಿಸಲು ತೊಡಗಿ ಖಾದಿ ಪ್ರಚಾರ, ಉಪ್ಪಿನ ಸತ್ಯಾಗ್ರಹ, ಮಧ್ಯಪಾನ ಚಳುವಳಿ, ಪರದೇಶ ವಸ್ತ್ರ ಬಹಿಷ್ಕಾರ ಚಳುವಳಿಗಳನ್ನು ನಡೆಸುತ್ತಾರೆ. ಖಾದಿಯನ್ನು ಜನರು ವಿರೋಧಿಸಿದರು ಸಹ ಮಾರಪ್ಪ ಕುಗ್ಗದೆ ಉತ್ಸಾಹದಿಂದ ಪ್ರಚಾರ ನಡೆಸುವನ್ನು ಮಧ್ಯಪಾನ ನಿಷೇದ ಚಳುವಳಿ ನಡೆಸಿ ಅಂತಪ್ಪ, ಕೂಸಮ್ಮೈಲಿ, ಅಂಗರಮೂಲ್ಯ ಸೇರಿದಂತೆ ಇತರರು ಕದ್ದು ಕುಡಿಯುವುದನ್ನು ಬಿಡಿಸುತ್ತಾನೆ. ಉಪ್ಪಿನ ಸತ್ಯಾಗ್ರಹದಲ್ಲಿ ಸ್ವತಃ ಮಾರಪ್ಪ ಜೈಲಿಗೆ ಹೋಗಿ ಬರುತ್ತಾನೆ. ಎಲ್ಲಕ್ಕಿಂತ ಹೆಚ್ಚಾಗಿ ಪರದೇಶಿ ವಸ್ತ್ರ ಬಹಿಷ್ಕಾರ ಚಳುವಳಿಯಲ್ಲಿ ಭಾಗವಹಿಸಿ ಪೋಲಿಸರಿಂದ ಹೊಡೆತ ತಿಂದ ಅದ್ರಾಮ ಸಾಯುವನು. ಇಂತಹ ರಾಷ್ಟ್ರೀಯ ಚಳುವಳಿಗಳು ಸ್ಥಳೀಯ ಮಟ್ಟದಲ್ಲೂ ಜರುಗಿ ಜನರ ಸಾಮಾಜಿಕ ಹಾಗೂ ಬೌದ್ಧಿಕ ಸ್ತರದಲ್ಲಿ ಬದಲಾವಣೆಗಳನ್ನು ತರುವುದಕ್ಕೆ ಗಾಂಧಿ ವಿಚಾರಗಳು ಗಾಂಧಿ ವಿಚಾರಗಳು ಪ್ರೇರಣೆ ನೀಡಿದವು. ಅದಕ್ಕಾಗಿಯೇ ಜನರು ಗಾಂಧಿನಿಧಿಗೆ ತಾ ಮುಂದು ನಾ ಮುಂದು ಎಂದು ನಗ-ನಾಣ್ಯ ನೀಡಲು ತೆರಳುತ್ತಾರೆ.

ಅದ್ರಾಮನು ಸತ್ತಿರುವ ವಿಷಯ ತಿಳಿದು ಪ್ರತಿಯೊಬ್ಬ ಜಾತಿಯ ಜನರು ಕಣ್ಣೀರುಡುವರು ಆದರೆ ಮುಸ್ಲಿಂ ಮತ್ತು ಬ್ರಾಹ್ಮಣರು ಕನಿಕರವನ್ನು ಸಹ ವ್ಯಕ್ತಪಡಿಸುವುದಿಲ್ಲ ಗುತ್ತಿನೊಡೆಯರು ತಮ್ಮ ಮನೆಯ

ಮಗನೆಂಬಂತೆ ಬೊಜ್ಜದ ಕ್ರಿಯೆಗಳನ್ನು ಮುಗಿಸುತ್ತಾನೆ. ಇಲ್ಲಿ ಗಮನಿಸಬೇಕಾದ ವಿಷಯವೆಂದರೆ ಒಳ್ಳೆಯ ಸ್ನೇಹ, ಪ್ರೀತಿ ಮಾನವೀಯತೆಗೆ ಜಾತಿಯಿಲ್ಲ. ಬದಲಾಗಿ ಅದಕ್ಕೂ ಮೀರಿದ ಪ್ರೀತಿ ತುಂಬಿದ ಸಂಬಂಧವಿದೆಯೆಂದೂ ಅದ್ರಾಮನ ವಿಷಯದಿಂದ ತಿಳಿದು ಬರುತ್ತದೆ. ಹಾಗೂ ಜಾತಿ ಕಟ್ಟಳೆಗಳು ಮುರಿದು ಬೀಳುತ್ತಿರುವುದನ್ನು ಈ ಸನ್ನಿವೇಶದಲ್ಲಿ ಕಾಣಬಹುದು.

ಇಲ್ಲಿನ ಕೇಂದ್ರವಸ್ತು "ಗಾಂಧಿ" ಎಂಬ ಮಾಂತ್ರಿಕರಾಗಿದ್ದು, ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಮಂಗಳೂರು ಪೇಟೆಗೆ ಮೂರು ಬಾರಿ ಆಗಮಿಸಿರುವ ಇವರ ವಿಚಾರಧಾರೆಗಳಿಂದ ಜನರಲ್ಲಾದ ಬದಲಾವಣೆಗಳನ್ನು ಗುರ್ತಿಸಲಾಗಿದೆ. ಗಾಂಧಿಯವರು ಅಸಹಕಾರ ಚಳುವಳಿ ಅಹಿಂಸಾತತ್ವ ಸ್ತ್ರೀ ಸಬಲೀಕರಣ, ಹರಿಜನೋದ್ಧಾರ, ಮದ್ಯಪಾನ ನಿಷೇಧ, ಉಪ್ಪಿನ ಸತ್ಯಾಗ್ರಹ, ಪರದೇಶಿ ವಸ್ತ್ರಬಹಿಷ್ಕಾರ ಖಾದಿ ಪ್ರಚಾರ ಮುಂತಾದ ಅಸ್ತ್ರಗಳಿಂದ ಬ್ರಿಟಿಷರನ್ನು ಭಾರತದಿಂದ ತೊಲಗಿಸಿ ಸ್ವಾತಂತ್ರ್ಯ ಪಡೆಯುವ ಮಹದಾಸೆಯ ಕನಸಿಗೆ ಜನರನ್ನು ಸಂಘಟಿಸಲು ಹೆಜ್ಜೆಯಿಡುವರು, ಗಾಂಧಿಯವರು ತಮ್ಮ ಭಾಷಣದಲ್ಲಿ "ಮುಸ್ಲಿಂ ಮತ್ತು ಹಿಂದೂಗಳು ವೈಷಮ್ಯ ಹೀಗೆ ಮುಂದುವರೆಯಬಾರದೆಂದೂ ನಾವೆಲ್ಲರೂ ಭಾರತವೆಂಬ ಸುಂದರ ತೋಟದಲ್ಲಿ ಅರಳಿರುವ ಹೂಗಳು ಎಂದರು" ಹಾಗೆಯೇ ಸನಾತನ ಧರ್ಮದ ಪಂಚಾಗದಲ್ಲೇ ಕೆಲವು ಮೂಲದೋಷಗಳಿವೆ ಎನ್ನುತ್ತಾರೆ. ಗಾಂಧಿಯ ಇಂತಹ ಮಾತುಗಳಿಂದ ಹೆಬ್ಬಾರರಷ್ಟೇ ಅಲ್ಲದೇ ಇಡೀ ಬ್ರಾಹ್ಮಣವರ್ಗಕ್ಕೆ ಸಿಡಿತು ಬಡಿದಂತಾಯಿತು. ಕಾರಣ ಅವರಿಗೆ ಎಲ್ಲಕ್ಕಿಂತ ಧರ್ಮವೇ ಶ್ರೇಷ್ಟ ಎಂಬ ಭಯ ತುಂಬಿದ ಅನುಮಾನ ಮತ್ತೊಂದೆಡೆ ಮನ ಮಾಡಿದೆ. ಆದ್ದರಿಂದ ಬ್ರಾಹ್ಮಣ ಸಂಕುಲ ಗಾಂಧಿಯ ಮಾತನ್ನು ವಿರೋಧಿಸುತ್ತದೆ. ಆದರೆ ಕೆಳವರ್ಗದ ಜನರು ಗಾಂಧಿಯ ಭಾಷಣಕ್ಕೆ ಕರಡಾತನ ವ್ಯಕ್ತಪಡಿಸುತ್ತಾರೆ.

ಗಾಂಧಿಯವರು ಮೂರನೇ ಬಾರಿಗೆ ಮಂಗಳೂರು ಪೇಟೆಗೆ ಭೇಟಿ ನೀಡಿದಾಗ ಅದ್ರಾಮನ ವಿಷಯ ತಿಳಿದು ಆತನ ವಿಧವೆ ಪತ್ನಿ ದ್ರೌಪತಿಯನ್ನು ವೇದಿಕೆಯನ್ನು ಕೂರಿಸಿ ಮುತ್ತೈದೆಯ ರೀತಿ ಸನ್ಮಾನಿಸುತ್ತಾರೆ. ಗಾಂಧಿಯವರ ಅಭಿಲಾಷೆ ವಿಧವೆಯು ಸಹ ಸಮಾಜದಿಂದ ವಿಮುಖಳಾಗಿ ಮಾನಸಿಕವಾಗಿ ತುಗ್ಗಬಾರದೆಂಬುದಾಗಿದೆ. ಆದ್ದರಿಂದಲೇ ಗಾಂಧಿ ಸ್ತ್ರೀಶಕ್ತಿ ಸಬಲೀಕರಣಕ್ಕೆ ಹೆಚ್ಚಿನ ಒತ್ತನ್ನು ನೀಡಿ ಆ ನಿಟ್ಟಿನಲ್ಲಿ ದ್ರೌಪದಿಯನ್ನು ಸನ್ಮಾನಿಸುತ್ತಾರೆ. ಈ ಸನ್ನಿವೇಶದಿಂದ ಸುತ್ತಲ ಜನರು ಸಂತೋಷ ವ್ಯಕ್ತಪಡಿಸಿದರೆ ಮನೆಗೆ ಬಂದಾಗ ಸೂರಕ್ಕೆ ಸಹ ಗಾಂಧಿಯನ್ನು ಕಾಣುದ ತವಕ ವ್ಯಕ್ತಪಡಿಸುತ್ತಾರೆ. ಕಾರಣ ದ್ರೌಪದಿಯ ಸನ್ಮಾನ ಆಕೆಗೂ ಖುಷಿ ನೀಡುತ್ತದೆ. ಅಲ್ಲದೆ ಗಾಂಧಿಯನ್ನು ನಿಂಧಿಸಿರುವುದಕ್ಕೆ ಕೊನೆಗೆ ವ್ಯಥೆಪಡುವಳು.

ಹಾಗೇಯೇ ಮಧ್ಯಾಹ್ನ ರೈಲ್ವೆ ನಿಲ್ದಾಣಕ್ಕೆ ಬಂದಿಳಿಯುವವರೆಗೂ ಮಾರಪ್ಪ ತಿಂಗಳಾಯರಿಗೆ ಉಸಿರಾಡಲು ಪುರುಸೊತ್ತುಇಲ್ಲದಷ್ಟು ಕೆಲಸ ಒಂದೇ ಕೆಲಸವಾದರೆ ಪರವಾಗಿಲ್ಲ ಕೆಲಸದ ಮೇಲೆ ಹತ್ತಿ ಬರುವಾಗ ಯಾವುದನ್ನು ಹಿಡಿಯುವುದು ? ಯಾವುದನ್ನು ಬಿಡುವುದು ? ಅಂತೂ ಓಡಾಡುವ ಕೆಲಸವೆಲ್ಲ ಮುಗಿದು ಇದೀಗ ಮಲಬಾರಿನಿಂದ ಬರುವ ರೈಲು ಬಂಡಿಗಾಗಿ ಕಾದು ಕೂತರು ಈ

ದೇಶಭಕ್ತರು ಕರ್ನಾಡರು ಹಾಗೂ ಜಿಲ್ಲೆಯ ಅನೇಕ ದೊಡ್ಡ ದೊಡ್ಡ ತಲೆಗಳೆಲ್ಲ ಗಾಂಧಿಗಾಗಿ ಕಾಯುತ್ತಿದ್ದರು ಆಗಲೇ ಘೋಷಣೆಗಳು ಮೊಳಗಲಾರಂಭಿಸಿದವು. ಗಾಂಧಿಯವರನ್ನು ಹೊತ್ತ ರೈಲು ಬಂಡಿ ಬಂದೇ ಬಿಟ್ಟಿತು. ಕಿವುಡುಗಟ್ಟುವ ಘೋಷಣೆಗಳ ಮಧ್ಯ ಗಾಂಧಿಯವರು ತನ್ನ ಪರಿವಾರದೊಂದಿಗೆ ಇಳಿದು ಬಂದರು. ಈ ಗಾಂಧಿಯವರನ್ನು ಕಾಣುವುದಕ್ಕೆ ಪಿಜಿನ ಮೂಲ್ಯನಿಲ್ಲ ಅಂತಪ್ಪನಿಲ್ಲ, ಮಂಜಪ್ಪನಿಲ್ಲ. ಗುತ್ತಿನೂಡೆಯರಿಲ್ಲ. ಪಿಜಿನ ಮೂಲ್ಯ ಈ ಲೋಕವನ್ನು ಬಿಟ್ಟು ಆಗಲಿದ್ದರೆ ಉಳಿದವರೆಲ್ಲರಿಗೂ ಸ್ಮಶಾನ ವೈರಾಗ್ಯ ಅಡರಿದ್ದರಿಂದ ಯಾವುದೋ ಬೇಡಾ....... ಯಾರು ಬೇಡಾ ಎಂಬಂತಾಗಿದೆ ಬದುಕುಳಿದರೆ ಮುಂದಿನ ಬಾರಿ ನೋಡೋಣ ಎಂಬ ದೂರವಾಸೆಯನ್ನು ಎದುರಿಗಿಟ್ಟು ಈ ಬಾರಿ ಇತ್ತ ತಲೆ ಹಾಕಿಲ್ಲ. ಹೀಗೆ ಗಾಂಧಿ ಮಂಗಳೂರಿಗೆ ಬರುವ ಗಾಂಧಿಜೀಯ ಆಗಮನಕ್ಕೆ ಮೆರವಣಿಗೆ ಕರ್ನಾಡರ ಮನೆಯುತ್ತ ಸಾಗಿ ಬರುತ್ತಿತ್ತು. ಗಾಂಧಿಯವರನ್ನು ಭವ್ಯ ಮೆರವಣಿಗೆಯಲ್ಲಿ ಬ್ಯಾಂದು ವಾಲಗದೊಂದಿಗೆ ಕರೆ ತರುವ ದಾರಿಯಲ್ಲಿ ಹೂ–ಪನ್ನೀರ ದೃಷ್ಟಿಯಾಗುತ್ತಿತ್ತು. ದಾರಿಯನ್ನೆಲ್ಲ ತಳರು ತೋರಣಗಳಿಂದ ಶೃಂಗಾರಿಸಲಾಗಿತ್ತು. ಪೇಟೆಗೆ ಪೇಟೆಯೇ ಸಾಗಿ ಬರುತ್ತದೆ. ಯೇನೋ ಎಂಬಂತೆ ಜನಸಾಗರ ಮೆರವಣಿಗೆಯಲ್ಲ ಸಾಗಿ ಬರುತ್ತಿತ್ತು. ಗಾಂಧಿಯವರನ್ನು ಭವ್ಯ ಮೆರವಣಿಗೆಯಲ್ಲಿ ಬ್ಯಾಂದು ವಾಲಗದೊಂದಿಗೆ ಕರೆ ತರುವ ದಾರಿಯಲ್ಲಿ ಹೂ–ಪನ್ನೀರ ದೃಷ್ಟಿಯಾಗುತ್ತಿತ್ತು. ದಾರಿಯನ್ನೆಲ್ಲ ತಳಿರು ತೋರಣಗಳಿಂದ ಶೃಂಗರಿಸಲಾಗಿತ್ತು. ಪೇಟೆಗೆ ಪೇಟೆಯೇ ಸಾಗಿ ಬರುತ್ತದೆಯೇನೋ ಎಂಬಂತೆ ಜನಸಾಗರ ಮೆರವಣಿಗೆಯಲ್ಲಿ ಸಾಗಿ ಬರುತ್ತಿತ್ತು. ಎಲ್ಲೆಲ್ಲೂ ಸಂಭ್ರಮ ಸಡಗರ ಪೋಲಿಸರ ತುಕಡಿಗಳೂ ಕೊಳೆತ ಮಾಂಸಕ್ಕಾಗಿ ಹಾತೊರೆಯುವ ರಣಹದ್ದುಗಳಂತೆ ಅಲ್ಲಿಂದ ಇಲ್ಲಿಗೆ ಇಲ್ಲಿಂದಲ್ಲಿಗೆ ವಲಸೆ ಹೋಗುತ್ತಿದ್ದವು. ಪೇಟೆಯ ದಿಕ್ಕು ದಿಕ್ಕುಗಳಿಂದ ಜಟಕಾ, ಎತ್ತಿನಗಾಡಿ ಮೋಟಾರುಗಳು ಜನರನ್ನು ಪೇಟೆ ಮಧ್ಯಕ್ಕೆ ಹೊತ್ತು ತರುತ್ತಿದ್ದವು. ಜನಸಾಗರವನ್ನು ಸಂಜೆಯ ಭಾಷಣ ಕೇಂದ್ರವಾದ ಕೇಂದ್ರ ಮೈದಾನದತ್ತ ತಳ್ಳಲು ಪೋಲಿಸರು ಪ್ರತಿನಿಧಿಗಳು ಹರಸಾಹಸ ನಡೆಸುತ್ತಿದ್ದರು. ಎಲ್ಲರಿಗೂ ಕರ್ನಾಡರ ಮನೆ ಮುಂದೆ ತಂಗಿದ್ದ ಗಾಂಧಿಯವರನ್ನು ಒಮ್ಮೆ ನೋಡುವ ಕಾತರ ಕೆಲ ಅದೃಷ್ಟವಂತರು ರೈಲಾಫೀನ ಹೊರಗಡೆ ಕಾದು ನಿಂತು ನಿಲ್ದಾಣದಿಂದ ಹೊರಬಂದ ಗಾಂಧಿಯವರನ್ನು ಕಣ್ತುಂಬಾ ನೋಡಿದ್ದರೆ ಹಲವು ಮಂದಿಗೆ ಕಳೆದ ಬಾರಿ ಮಂಜಪ್ಪ ಪಿಜಿನ ಅಂತಪ್ಪನವರಿಗಾದ ಕತಯೇ ಆಯಿತು. ಗಾಂಧಿ ಸರಿಯಾಗಿ ಕಾಣಿಸಲೇ ಇಲ್ಲ. ನೋಡಲು ಕಾತರಿಸುತ್ತಿದ್ದ ಎಲ್ಲರಿಗೂ ಸಂಜೆ ಮೈದಾನದತ್ತ ಸಾರ್ವಜನಿಕ ಸಭೆಯಲ್ಲಿ ಗಾಂಧಿಯವರು ಕಾಣಿಸಿಕೊಂಡರು.

ಹೆಬ್ಬಾರರ ತಂಡ ಗಾಂಧಿಯವರ ಭಾಷಣವನ್ನು ಕಿವಿಗೊಟ್ಟು ಆಲಿಸುತ್ತಿತ್ತು. ಗಾಂಧಿಯವರು ಭಾಷಣದೊಳಗೆ ಮುಸಲ್ಮಾನರ ಸುದ್ದಿ ಎತ್ತಿದೊಡನೆ ಹೆಬ್ಬಾರರ ಕಿವಿ ನಿಮಿರಿತ್ತು. ಮುಸಲ್ಮಾನರನ್ನು ಇಲ್ಲಿಂದ ಒದ್ದೋಂಡಿಸಬೇಕು ಎಂದು ಗಾಂಧಿಯವರು ಜನರಿಗೆ ಕರೆ ಕೊಡುತ್ತಾರೇನೋ ಎಂಬ ನಿರೀಕ್ಷೆ, ಕೂತೂಹಲ, ಸಂತಸದಿಂದ ಆ ಸುದ್ದಿ ಮಾತನ್ನು ಕೇಳಲು ಹೆಬ್ಬಾರರು ದೇಹವನ್ನೆಲ್ಲ ಕಿವಿಯಾಗಿರಿಸಿ ಕೂತರು ಉತ್ತರ ಭಾರತದಲ್ಲಿ ಹಿಂದೂಗಳು – ಮುಸಲ್ಮಾನರು ಒಬ್ಬರ ತಲೆಯನ್ನೊಬ್ಬರು ಒಡೆಯುತ್ತಿದ್ದಾರೆ ಎಂದು ಗಾಂಧಿಯವರು ತೀರಾ ದುಃಖ ವಿಷಾದದಿಂದ ವಿಚಾರವನ್ನರುಹುತ್ತಿದ್ದರೆ

ಹೆಬ್ಬಾರರು ತೀರಾ ಆನಂದಿತರಾದರು. "ಆ ಕಾಲ ಆ ಪರಿಸ್ಥಿತಿ ಇಲ್ಲೂ ಒದಗಿ ಬರಬಾರದೆ ? ಓ.... ಅಲ್ಲಿ ವೇದಿಕೆ ಪಕ್ಕ ಕೈ ಕಟ್ಟಿ ನಿಂತು 'ಪಕೀರನಿಗೆ ಪಕೀರಿಲ್ಲದಂತೆ' ಎಂದು ಗಾಂಧಿ ಭಾಷಣ ಕೇಳಿಸಿಕೊಳ್ಳುತ್ತಿರುವ ಆ ಬ್ಯಾರಿಕುಟ್ಟಿ ಅದ್ರಾಮನ ತಲೆಯನ್ನು ಆ ದೊಂಬಿಯೊಳಗೆ ನಾನೇ ಒಡೆದು ಹಾಕಲಾರನೆ" ಎಂದು ಹೆಬ್ಬಾರರು ಹೇಳಿದರು.

ಭಾಷಣ ಮುಂದುವರೆಸಿದ ಗಾಂಧಿಯುವರು "ಹಿಂದೂ-ಮುಸ್ಲಿಂ ವೈಷಮ್ಯ ಹೀಗೆ ಮುಂದುವರಿಯಬಾರದು. ನಾವೆಲ್ಲರೂ ಸುಂದರ ತೋಟದಲ್ಲಿ ಅರಳಿರುವ ಹೂಗಳು ಪರರು ಬಂದು ಈ ತೋಟವನ್ನಾಗಲೀ, ಗುಲಾಬಿಯನ್ನಾಗಲಿ ಹಾಳುಗೆಡುವಲು ಬಿಡಬಾರದು. ನಮ್ಮ ನಮ್ಮೊಳಗಿನ ವೈಷಮ್ಯವನ್ನು ಆದಷ್ಟು ಬೇಗ ತೊಡೆದು ಹಾಕಿ ನಾವು ಮಧುರ ಸಂಬಂಧ ಬಾಂಧವ್ಯ ಬೆಳಸಿಕೊಳ್ಳಬೇಕೆಂಬ ನನ್ನ ಹಾರೈಕೆ" ಎಂದು ಹೇಳುತ್ತಿದ್ದಂತೆ ಕಿವಿಯು ಹೂ ಹಾರಿಹೋಗುವಂತಾ ಕರತಾಡನವಾಯಿತು. ಹೆಬ್ಬಾರರಿಗೆ ಗಾಂಧಿಯವರ ಮೇಲೆ ಇನ್ನಿಲ್ಲದಂತಾ ತಿರಸ್ಕಾರ ಮೂಡಿ ಬಂತು ಈತ ಹೋಗಿ ಬಂದಲ್ಲೆಲ್ಲಾ ಹೀಗೆ ಒದರುತ್ತಾ ಹೋದರೆ ಈ ಬ್ಯಾರಿಗಳು ಹಿಂದುಗಳ ಮನೆ ನುಗ್ಗಿಯೇ "ಸುಮಧುರ ಬಾಂಧವ್ಯ" ಮೂಡೇ ತೋರಿಸುತ್ತಾನೆ ಎಂದು ಹಲ್ಲುಮಸೆದರು.

ಇಲ್ಲಿ ಬಾಕಲರಿಂದ ವೃದ್ಧರವರೆಗೆ ಕೆಳವರ್ಗದ ಮೇಲ್ವರ್ಗದ ಜನರವರೆಗೆ ಪ್ರತಿಯೊಬ್ಬರು ಗಾಂಧಿ ವಿಚಾರಗಳಿಗೆ ಮನಸೋತಿದ್ದಾರೆ. ಇಲ್ಲಿ "ಗಾಂಧಿ ಬಂದ" ಎನ್ನುವುದು ಜನರ ಮನಸ್ಸಿನಿಂದಲೇ ಬದಲಾವಣೆಯ ಚಿಂತನೆ ಹೊರಬಂದಿತು ಎಂಬ ಅರ್ಥವನ್ನು ನೀಡುತ್ತದೆ. ಗಾಂಧಿ ಎಂಬ ಹೆಸರೊಂದು ಇಷ್ಟೊಂದು ಬದಲಾವಣೆಗೆ ಕಾರಣವಾದುದನ್ನು ಇಲ್ಲಿ ಕಾಣಬಹುದು.

16 ಅಧ್ಯಾಯವನೊಳಗೊಂಡಿರುವ ಈ ಕಾದಂಬರಿ ಜಾತಿವ್ಯವಸ್ಥೆ ರಾಜಕೀಯ ವಿಪ್ಲವ ಸ್ವಾತಂತ್ರ್ಯ ಹೋರಾಟ, ಮೌಢ್ಯ ಕಂದಾಚಾರಗಳು, ಗಾಂಧಿಯ ವಿಚಾರಗಳು, ಸಾಮಾಜಿಕ ಅವ್ಯವಸ್ಥೆಗಳ ಜೊತೆಗೆ ತುಳುನಾಡಿನ ಸಂಸ್ಕೃತಿಯೊಂದಿಗೆ ಮೈವೆತ್ತಿ ನಿಂತಿದಿ, ಪಟೇಲ ಸೀನಪ್ಪಯ್ಯ ಹೆಬ್ಬಾರರು ಗುತ್ತಿನಶೆಟ್ಟರು, ಬೆಸ್ತರು, ಆದಿಯಾಗಿ ಮುಂಡಾಲ, ಕೊರಗ, ಮುಗೇರ ಸೇರಿದಂತೆ ಆಯಾ ಜಾತಿಯ ಹಲವು ಪಾತ್ರಗಳು ಈ ಕಾದಂಬರಿಗೆ ಪೂರಕವಾಗಿದ್ದು, ಅವು ಎಲ್ಲಿಯೂ ಹೆಚ್ಚಾಯಿತು ಎಂಬುದಾಗಿ ಬೇಸರ ಮೂಡುವುದಿಲ್ಲ ಕಾದಂಬರಿಯ ಓಟ ಸಮತೋಲನೆಯನ್ನು ಸಾಧಿಸುತ್ತದೆ.

ಗಾಂಧಿ ಬಂದ ಕಾದಂಬರಿಯ ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಸ್ಥಳೀಯ ವ್ಯಕ್ತಿ ಸಮೂಹಗಲು ತೋರಿಸಿದ ಪ್ರತಿಕ್ರಿಯೆಯನ್ನು ಕುರಿತು ರಚನೆ ದೇಶದ ರಾಜಕೀಯ ಆಗುಹೋಗುಗಳು ಮತ್ತು ತುಳುನಾಡಿನ ಸಂಸ್ಕೃತಿ ಆಚರಣೆಗಳು ಇಲ್ಲಿ ಪ್ರಾಧಾನ್ಯವಹಿಸಿದರುವ ಅಂಶಗಳಾಗಿವೆ.

ಕಾದಂಬರಿಯ ವಸ್ತುವಿನ್ಯಾಸವು ಕೆಲವು ಪ್ರಮುಖ ಘಟ್ಟಗಳಿಂದ ಸುತ್ತುವರೆದಿದೆ ಅವುಗಳೆಂದರೆ

√ ತುಳುನಾಡಿನ ಸಂಸ್ಕೃತಿಯನ್ನು ಬಿಂಬಿಸುವುದು.

√ ವರ್ಗ ಸಂಘರ್ಷದ ಚಿತ್ರಣ

√ ಮೌಢ್ಯ ಕಂದಾಚಾರಗಳನ್ನು ದಾಟುವುದು.

√ ಸ್ತ್ರೀ-ಪರ ವಿರೋಧಿ ನಿಲುವುಗಳು.

ಕೃತಿಯನ್ನು ಸಮಗ್ರವಾಗಿ ಗ್ರಹಿಸಿದಾಗ ತುಳುನಾಡಿನ ಕಡಲ ಕರೆಯ ವಿಶಿಷ್ಟ ಸಂಸ್ಕೃತಿ ವಿಶೇಷ ಅನುಭವ ಹೃದ್ಯವಾಗುತ್ತದೆ. ಕಥೆಯ ಬೆಳವಣಿಗೆಯ ಸಂದರ್ಭದಲ್ಲಿ ಔಚಿತ್ಯ ಪೂರ್ಣವಾಗಿ ಒಂದೊಂದಾಗಿ ತನ್ನ ವಿಶೇಷತೆಯನ್ನು ತೆರೆದಿಡುತ್ತದೆ. ಕಂಬಳ, ಕೋಳಿಕಟ್ಟೆ, ಕೋಲ, ಅಳಿಯಕಟ್ಟು, ಸಂತಾನ, ಪೈರುಗಳ, ಸೀಮತದೂಟ, ಆಟಿ ಅಮಾವಾಸ್ಯೆ ಮದ್ದು ಜನಿವಾರದ ನೂಲು ಬದಲಿಸುವ ಸಡಗರ, ಮಾರಿಪೂಜೆ ಬೆಸ್ತರ ಕೂಟದ ಜರಂದಾಯ ನೇಮ, ಕಂಗಿಲ ಕುಣಿತ ಇವೇ ಮೊದಲಾದ ಪೂಜೆ, ಹಬ್ಬ, ಜಾತ್ರೆಗಳು ವಿವಿಧ ವರ್ಗದ ಸಾಮಾಜಿಕ ಹಾಗೂ ಸಾಂಸ್ಕೃತಿಕ ಗುಣಗಳಿಂದ ಕೂಡಿ ಕಥೆಗೆ ಪೂರಕವಾಗಿ ಬರುತ್ತದೆ.

ಕಥೆಯ ಆರಂಭ ತುಳುನಾಡಿನ ಕ್ರೀಡೆಗಳಲ್ಲಿ ವಿಶಿಷ್ಟವಾದ ಕಂಬಳ ಓಟದ ಸಂಭ್ರಮದೊಂದಿಗೆ ಆರಂಭವಾಗಿ ಪಾತ್ರಗಳ ಮನೋಭಾವನೆಗಳನ್ನು ಕಥೆಯ ಮುಂದುವರಿಕೆಗೆ ಭದ್ರ ಬುನಾದಿಯನ್ನೂ ಆರಂಭದಲ್ಲೇ ಕೃತಿಕಾರರು ಅಳವಡಿಸಿದ್ದಾರೆ. ಕಂಬಳದ ಕೋಣಗಳು ಓಟದಲ್ಲಿ ಗೆಲ್ಲುವುದು ಮನೆತನದ ಪ್ರತಿಷ್ಠೆಯ ಕುರುಹಾಗಿತ್ತು. ಪಟೇಲ ಸೀನಪ್ಪಯ್ಯ ಒಬ್ಬ ಧೂತ ವ್ಯಕ್ತಿಯಾಗಿ ತಾನು ಸಂಪ್ರದಾಯಬದ್ಧನೆಂದೂ ಆ ನೆರಳಲ್ಲೇ ತಾನು ತಪ್ಪು ಮಾಡಿದರೂ ಸಮಜಾಯಿಷಿ ನೀಡಿ ತನ್ನ ಮಗಳು ವಿಧವೆ ದ್ರೌಪದಿಯನ್ನು ಸಂಪ್ರದಾಯದ ಸೋಗಿನಲ್ಲಿ ಬಂಧಿಯಾಗಿಡಲು ವಿಫಲ ಪ್ರಯತ್ನ ಮಾಡುತ್ತಾನೆ. ಕಂಬಳದ ಒಟ ಸೀನಪ್ಪನ ಮನೆಯ ಸಂಭ್ರಮವಾದರೂ ಪಟೇಲನಾದುದರಿಂದ ಊರಿಗೆ ಊರೇ ಆ ಸಂಭ್ರಮದಲ್ಲಿ ತಮ್ಮ ಕೆಲಸವೆಂಬಂತೆ ಪಾಲ್ಗೊಳ್ಳಬೇಕು. ಕಂಬಳದಲ್ಲಿ ಪಟೇಲನಾದುದರಿಂದ ಊರಿಗೆ ಊರೇ ಆ ಸಂಭ್ರಮದಲ್ಲಿ ತಮ್ಮ ಕೆಸಲವೆಂಬಂತೆ ಪಾಲ್ಗೊಳ್ಳಬೇಕು. ಕಂಬಳದಲ್ಲಿ ಪಟೇಲರ ಪರವಾಗಿ ಓಡುವ ಲವಕುಶರಿಗೆ ವಿಶೇಷ ಆಸಕ್ತಿ ವಹಿಸಿ ರಾಜ ಪುರಸ್ಕಾರವನ್ನು ನೋಡಿ ಪಾಲಕ ಕೂಸಮ್ಮೈಲಿ ಹಲುಬಿದರೂ ಒಮ್ಮೆ ಸೋತ ಅನಂತರದ ಕೋಣಗಳ ಪರಿಸ್ಥಿತಿಯನ್ನು ನೆನೆಸಿಕೊಂಡು ತನಗೆ ಬಡತನವೆ ಸಾಕೆಂದರೂ ಸುಮ್ಮನಾಗುತ್ತಾನೆ.

ಕಂಬಳದ ಕೋಣಗಳ ಲವ-ಕುಶರಿಗೆ ದ್ರೌಪದಿಯನ್ನು ಹೋಲಿಸುವುದು ಕೋಳಿ ಕಟ್ಟದಲ್ಲಿ ಬಟ್ಟೆ ಮತ್ತು ಒಂಟೆಯಾಗಿ ಗುತ್ತಿನ ಪಾಂಡುಶೆಟ್ಟಿ ಹಾಗೂ ಪಟೇಲರ ಮನೆತನಗಳ ನಡುವೆ ನಡೆಯುವ ಶೀತಲ ಹೋರಾಟವು ಕೋಳಿಕಟ್ಟದಲ್ಲಿ ಸಮನಾಗಿ ಹೆಬ್ಬಾರರಿಗೆ ಸಂಬಂಧಿಸಿದ ನಾಲ್ಕು ಹಾಗೂ ಪಾಂಡುಶೆಟ್ಟಿಗೆ ಸಂಬಂಧಿಸಿದ ನಾಲ್ಕು ಕೋಳಿಗಳು ಗೆದ್ದುವೆಂದೂ ಹೇಳುವಲ್ಲಿ ಎರಡೂ ಮನೆತನದ ಹೋರಾಟದ ಸಂಪ್ರದಾಯ ಬದ್ಧವಾಗಿ ಸಂಪ್ರದಾಯ ವಿರೋಧವಾಗಿ ಸಮರ್ಪಕವಗಿಯೇ ನಡೆಯುತ್ತದೆ ಎಂಬುದಕ್ಕೆ ಸಂಕೇತವಾಗಿದೆ.

ಅಳಿಯ ಕಟ್ಟು ಸಂತಾನ ಪುರುಷ ಪ್ರಧಾನ ವ್ಯವಸ್ಥೆಗಿಂತ ಪಿತೃಪ್ರಧಾನ ಕುಟುಂಬಕ್ಕಿಂತ ವ್ಯತಿರಿಕ್ತವಾದ ಪದ್ಧತಿ ಇಲ್ಲಿ ತಾಯಿಯೇ ಮನೆಯ ಯಜಮಾನಿ, ಉತ್ತರಾಧಿಕಾರಿ ಮನೆಯ ಸರ್ವಾಧಿಕಾರಿ ಸ್ತ್ರೀ ಆಗಿರುತ್ತಾಳೆ. ಗಂಡನನ್ನು ಊಳಿಗದವನಂತೆ ಕಾಣುವುದು ಸರ್ವೇ ಸಾಮಾನ್ಯವಾಗಿರುತ್ತದೆ. ಆತನ ಗಂಡಸ್ತನಕ್ಕಾಗಿ ಮಾತ್ರ ಆತನನ್ನು ಬದುಕಿಸುವುದು ಎಂದು ಮಾರಪ್ಪ ತಾಯಿ ಸೂರಕ್ಕಂಜವ್ವ ಹೇಳುವುದು ಅಳಿಯ ಕಟ್ಟು ಸಂದಾನದಲ್ಲಿ ಪುರುಷಗಿರುವ ಮಾನ್ಯತೆ ಸ್ತ್ರೀಯ ದರ್ಪವನ್ನು ತಿಳಿಸುವುದರ ಜೊತೆಗೆ ಈ ಪದ್ದತಿಯ ಸಾಧಕಗಳನ್ನು ಕುರಿತು ಈ ಕೃತಿ ಸಂಕ್ಷಿಪ್ತವಾಗಿ ತಿಳಿಸುತ್ತದೆ.

ಕಂಗಿಲಕುಣಿತ ಮುಂಡಾಲರು ಮತ್ತು ಗೊಡ್ಡರೆಂಬ ಜನಾಂಗ ಮಾರಿಯನ್ನು ಖುಷಿಪಡಿಸಿ ಊರಿಗೆ ತಟ್ಟಿದ ಅನಿಷ್ಟ ರೋಗ ಪೀಡೆಗಳನ್ನು ದೂರಮಾಡಲೆಂದೂ ಊರಿನ ಪ್ರಮುಖರ ಮನೆಗಳಲ್ಲಿ ವಿಶೇಷ ಉಡುಗೆ–ತೊಡುಗೆಯೊಂದಿಗೆ ಮಾಯಿದ ಪುರುಷದ ಹಾಡು ಹೇಳಿ ಪ್ರತಿಯಾಗಿ ಏನ್ನನ್ನಾದರೂ ಪಡೆಯುವುದು ಪದ್ದತಿ ಇಲ್ಲಿ ದ್ರೌಪತಿಯಲ್ಲಿ ಪ್ರೇಮಾಂಕುರವಾಗಿದ್ದ ಅದ್ರಾಮನಿಗೆ ಅವಳನ್ನು ಕಾಣಬೇಕೆಂಬ ಹಂಬಲವಿದ್ದರೂ ಹೆಬ್ಬಾರರ ಕಠೋರ–ದೃಷ್ಟಿಗೆ ದ್ರೌಪದಿಯನ್ನು ಗುರಿಮಾಡಲಿಚ್ಚಿಸದೆ ಒದಗಿ ಬಂದ ಸನ್ನಿವೇಶವನ್ನೇ ಉಪಯೋಗಿಸಿಕೊಂಡು ಮುಂಡಾಲರಲ್ಲಿ ತಾನು ವೇಷಧಾರಿಯಾಗಿ ಬಂದು ಅವಳನ್ನು ನೋಡಿ ತೃಪ್ತಿಪಟ್ಟುಕೊಳ್ಳುತ್ತೇನೆ. ಜೀವನದಲ್ಲಿ ನಿರಾಶೆಯನ್ನು ಬಳಸಿಕೊಂಡಿದ್ದ ದ್ರೌಪದಿಗೆ ಬಿಡುಗಡೆಯ ಸಂಕೇತವಾಗಿ ಗೋಚರಿಸುತ್ತಾನೆ.

ಕೋಲ ಯುಗಾದಿಯ ನಂತರ ಬರುವ ಹಬ್ಬ ಊರವರಿಗೆ ಒಕ್ಕಲು ಆಳುಗಳಿಗೆ ಸಂಭ್ರಮವಾದರೆ ಹೆಬ್ಬಾಕರಿಗೆ ತಲೆನೋವಿನ ಜವಾಬ್ದಾರಿ ಕೊಡುವ ಭೋಗದಲ್ಲಿ ಕಾಲಲ್ಲಿ ಕೀಳು ತಪ್ಪಿದರೂ ಜುಮಾದಿಗೆ ಸಿಟ್ಟೇರುತ್ತದೆ. ಕೋಲ ಜುಮಾದಿಗೆ ಹರಕೆ ಕೊಡುವುದು ಈ ಪದ್ದತಿಯ ವೈಶಿಷ್ಟ್ಯ ಅದಕ್ಕಾಗಿ ಹಾಕುವ ಚಪ್ಪರ, ಭೂತದ ಭಂಡಾರ ಸಿಂಗದನ ಬಲಿಯನ್ನು ಹೆಣೆಯುವುದು ಇವೆಲ್ಲಾ ಹಬ್ಬದ ಆಚರಣೆಗಳ ಪ್ರತೀಕವಾಗಿ ಗೋಚರಿಸುತ್ತದೆ. ಆಡಿ ಅಮಾವಾಸ್ಯೆ ಮುದ್ದಿನ ಬಗ್ಗೆ ಹೇಳುವುದಾದರೆ ಮಳೆಗಾಲದ ಸಂದರ್ಭದಲ್ಲಿ ಬಿಡುವೇ ಇಲ್ಲದೆ ಮಳೆ ಸುರಿಯುವುದರಿಂದ ರೋಗ–ರುಜಿಗಳು ಉಲ್ಬಣಗೊಳ್ಳುತ್ತದೆ. ತನ್ನ ಮಕ್ಕಳನ್ನು ರೋಗಗಳಿಂದ ಪಾರು ಮಾಡಲು ಆಡಿ ಅಮಾವಾಸ್ಯೆಯ ಮೊದಲ ರಾತ್ರಿ ಭೂತಾಯಿ ಪಾಲೆ ಮರದ ಕತ್ತೆಯಲ್ಲಿ ಔಷಧವನ್ನು ತುಂಬಿಸಿಡುತ್ತಾಳಂತೆ, ಊರಿನ ಪುರುಷರೆಲ್ಲಾ ಅಮಾವಾಸ್ಯೆ ರಾತ್ರಿಯಲ್ಲಿ ವಿವಸ್ತ್ರವಾಗಿ ಹೋಗಿ ಕಲ್ಲಿನಿಂದ ಜಜ್ಜಿ ತೆಗೆದುಕೊಂಡು ಬಂದರೆ ಕೆತ್ತಿ ಜಜ್ಜಿ ರಸ ತೆಗೆದು ಅದಕ್ಕೆ ಕರಿಮೆಣಸು ಓಮ ಮೊದಲಾದ ಪದಾರ್ಥಗಳನ್ನು ಸೇರಿಸಿ ಕಬ್ಬಿಣದ ತುಂಡೊಂದನ್ನು ಕಾಯಿಸಿ ಆ ರಸದೊಳಗೆ ಹಾಕಿಬಿಟ್ಟರೆ ಸರ್ವರೋಗ ನಿರೋಧಕ ರಾಮಬಾಣ "ಆಡಿ ಅಮಾವಾಸ್ಯೆ ಮದ್ದು" ಸಿದ್ದವಾಗುತ್ತದೆ.

ಇವುಗಳಿಲ್ಲದೆ ಪೂರಿಪೂಜೆ ಮುದ್ರಾಧಾರಣೆ (ಬ್ರಾಹ್ಮಣರಿಗೆ ಸೀಮಿತ) ಪಟೇಲರಿಗೆ ಗೇಣಿ ಕೊಡುವುದು ಮೊದಲಾದ ಆಚರಣೆಗಳು ನಿಯಮಗಳು ಸಾಂಸ್ಕೃತಿಕ ಹಿನ್ನಲೆಯಲ್ಲಿ ವ್ಯಕ್ತಗೊಂಡಿದೆ. ಹದಿನೆಂಟರ ಎಳೆಯು ಜೋವು ದ್ರೌಪದಿಯನ್ನು ತಂದೆ ಸೀನಪ್ಪಯ್ಯ ಮತ್ತು ತಾಯಿಯ ನಿಷ್ಠಾವಂತ ಬ್ರಾಹ್ಮಣ

ಸಮುದಾಯದ ಚೌಕಟ್ಟಿನಲ್ಲಿ ಬಂಧಿಸಲ್ಪಟ್ಟಿದ್ದಾರೆ. ಯಾವ ನೆರೆಯೂ ಕಪ್ಪೆಯೂ ಮೂಗನ್ನು ಮುಟ್ಟುವುದಿಲ್ಲವಂತೆ ಹಾಗೆಯೇ ನನ್ನೊಳಗಿನ ದುಗುಡ-ದುಮ್ಮಾನ ತುಡಿತ ಹೊಡೆತಗಳೂ ಅಪ್ಪಯ್ಯನಿಗೆ ಮುಟ್ಟುವುದಿಲ್ಲವೆಂದೂ ತನ್ನೊಳಗೆ ಆಕ್ರೋಶದ ಕಿಡಿಯಿದ್ದರೂ ಹೇಳುವ ಧೈರ್ಯವಿಲ್ಲ. ಧರ್ಮ ಸೂಕ್ಷ್ಮಜ್ಞರು ಆಕೆಯ ವಿರೋಧ ಬಿಕ್ಕಳಿಕೆಗಳ ನಡುವೆಯೇ ಆಕೆಯ ತಲೆಯನ್ನು ಬೋಳಿಸಿದರಾದರೂ ಬೋಳಿಸಿದಂತೆಲ್ಲಾ ಮತ್ತೆ ಮತ್ತೆ ಚಿಗುರಿ ಒಳೆವ ಕೂದಲಂತೆಯೇ ಆಕೆಯೊಳಗೆ ಚಿಗುರಿ ಬರುವ ಬಯಕೆ ಭಾವನೆ ಹಂಬಲಗಳನ್ನು ಅದುಮಿಡುವ ಶಕ್ತಿ ಆಕೆಗೆ ಇಲ್ಲವಾಯಿತು. ಲವ-ಕುಶರನ್ನು ನೋಡಿ ಹಬ್ಬದ ಸಡಗರವನ್ನು ಸವಿಯಬೇಕಿದ್ದ ದ್ರೌಪದಿ "ಆ ಕೋಣದ ಸಿಂಗಾರವೆಲ್ಲಾ ಜಯ ತಂದು ಕೊಡುವ ಸಾಮರ್ಥ್ಯ ಇರುವವರಿಗೆ ಮಾತ್ರ ಮುತ್ತೈದೆತನ ಕಳಚಿಕೊಂಡು ಮುಂಡೇತನ ಬಾಚಿಕೊಂಡೊಡನೆ ತನ್ನ ಸಿಂಗಾರವೆಲ್ಲಾ ನೆರೆಯ ನೀರು ಇಳಿದು ಹೋದಂತೆ ಸರ್‍ರನೆ ಇಳಿದು ಹೋಗಲಿಲ್ಲವೆ ಎಂದು ತನ್ನನ್ನು ಈ ವ್ಯವಸ್ಥೆಯನ್ನು ರೂಪಿಸಿದ ಇಡೀ ಸಮಾಜವನ್ನೇ ಪ್ರಶ್ನಿಸುತ್ತಾಳೆ. ಇದು ಒಂದು ಸಂಪ್ರದಾಯವು ಸ್ತ್ರೀಯ ಸಂವೇದನೆಗೆ ಸ್ಪಂಧಿಸದ ಅರ್ಥಮಾಡಿಕೊಳ್ಳದ ವಿಷಯ ಸ್ಥಿತಿಯನ್ನು ಬಿಂಬಿಸುತ್ತದೆ.

ಅದ್ರಾಮ ಮತ್ತು ದ್ರೌಪದಿಯಲ್ಲಿ ಪ್ರೇಮಾಂಕುರವಾಗಿರುವುದನ್ನು ತಿಳಿದು ತಲೆಯಲ್ಲೆಲ್ಲಾ ಅದ್ರಾಮನನ್ನೇ ಕುರಿತು ಯೋಚಿಸಿ ತನ್ನ ಅಂತರಂಗಕ್ಕೆ ಪಾತಾಳಗರಡಿ ಹಾಕಿ ಶೋಧಿಸುವ ಕಾರ್ಯದಲ್ಲಿ ತಲ್ಲೀನರಾಗಿದ್ದ ಅವರಲ್ಲಿ ಹಾಳು ಬಾವಿಯ ಕೆಸರೆತ್ತುವಾಗ ತರಾವರಿ ವಸ್ತುಗಳೆದ್ದು ಬರುವಂತೆ ಅನೇಕಾನೇಕ ಭಾವನೆಗಳು ಪ್ರಶ್ನೆಗಳು ಗುಮಾನಿಗಳು ಸಮಸ್ಯೆಗಳ ಭಾರಕ್ಕೆ ಸೀನಪ್ಪಯ್ಯನ ಬ್ರಾಹ್ಮಣ ಸಂಪ್ರದಾಯ, ವ್ಯಕ್ತಿತ್ವ, ಅಹಂಕಾರ, ವರ್ಚಸ್ಸು, ಉದ್ಧಟತನ, ಚೋರತ್ವ ಎಲ್ಲವೂ ಜಗ್ಗಿಹಂತಾಗುತ್ತಿತ್ತು.

ದ್ರೌಪದಿಯನ್ನು ಸಂಪ್ರದಾಯದಾಚೆ ನೋಡದಂತೆ ಕಟ್ಟಪ್ಪಣೆ ಮಾಡಿ ಕಾವಲಿರಿಸುವ ಹೆಬ್ಬಾರರು ಸಂಜೆಯಾಗುತ್ತಲ್ಲೇ ಕೈನಾಲಿನ ಪುಟ್ಟಮ್ಮಕ್ಕನ ಹಿತ್ತಲಿನತ್ತ ದಾಪುಗಾಲಾಕುತ್ತಾನೆ. ಸಮಾನ ಕುಲಸ್ಥರ ಧರ್ಮದಲ್ಲಿ ಇಂತಹದ್ದಕ್ಕೆಲ್ಲ ಅವಕಾಶವಿದೆಯೆಂದೂ ಕಿವಿಯಲ್ಲಿ ಉಸುರುತ್ತಲೆ ಪುಟ್ಟಮ್ಮಕ್ಕ ಗರ್ಭಿಣಿಯಾದಾಗ ನಾಟಿಮದ್ದು ನೀಡಿ ಶಮನಗೊಳಿಸಿದ್ದಾರೆ. ನಾಲ್ಕನೇಯ ಮಗುವಿನ ಭ್ರೂಣ ಹತ್ಯೆ ಮಾಡುವಲ್ಲಿ ವಿಫಲರಾಗಿ ಮಗುವಿನ ಹೂಕ್ಕಳ ಬಳ್ಳಿ ಬಿಗಿಯದೆ ಮಗುವನ್ನು ನಿರ್ಜೀಗೊಳಿಸಿ ಬಟ್ಟೆಯಲ್ಲಿ ಸುತ್ತಿ ಹರಿಯುವ ನೀರಿಗೆ ನಿರ್ದಾಕ್ಷಿಣ್ಯವಾಗಿ ಎಸೆದು ಬಿಡುತ್ತಾರೆ. ನೀರಿನಲ್ಲಿ ಬಿಟ್ಟ ಎಳೆ ಮಗುವಿನ ಶವವನ್ನು ನಾಯಿ ಎಳೆದಾಡುತ್ತಿದ್ದಾಗ ಊರವರಿಗೆ ತಿಳಿದು ಪರಿತಪಿಸುವಾಗ ಮನುಷ್ಯನ ನೈತಿಕ ಅಧಃಪತನದ ಬಗ್ಗೆ ಜನರಿಗೆ ನೀತಿ ಬೋಧನೆ ಮಾಡುತ್ತಾರೆ.

ಗಾಂಧಿನಿಧಿಗೆಂದು ಕೊಟ್ಟಿದ್ದ ನಗ-ನಾಣ್ಯಗಳನ್ನು ಪುಟ್ಟಮ್ಮಕ್ಕನಿಗೆ ಕೊಟ್ಟು ಗಾಂಧಿವಾದಿಗಳ ವಿರೋಧಕ್ಕೆ ತುತ್ತಾಗುತ್ತಾರೆ. ಸನಾತನ ಬ್ರಾಹ್ಮಣ ಕೋಟಿಯಲ್ಲಿ 'ಅದ್ರಾಮ ಬಲ' ತೋಡಿ ಬರುವವನೆಂದೂ ಹೆಬ್ಬಾರರು ತಿಳಿದಿರುತ್ತಾರೆ. ಅದಕ್ಕಾಗಿ ತಮ್ಮ ಬೇಲಿಯನ್ನು ಭದ್ರವಾಗಿಡಲು ಹೆಂಡತಿ ರುಕುಣಿಯಮ್ಮನೊಂದಿಗೆ ಸೇರಿ ಯತ್ನಿಸಿದರೆ, ಆದ್ರಾಮ ಆ ಕೋಟೆಯನ್ನು ಭೇಧಿಸಿಯೇ

ಒಳನುಗ್ಗಬೇಕೆಂದೂ ತಾಳೆಯಿಂದ ತಯಾರಿ ನಡೆಸುತ್ತಾರೆ. ಮಾರಪ್ಪ ತೋಡಿನ ನೀರನ್ನು ಕಡಲು ಸೇರದ ಹಾಗೇ ಮಾಡಲು ಯಾವ ಉಪಾಯವನ್ನು ಮಾಡಬಹುದೋ ಅದನ್ನೇ ಮಾಡಿಬಿಡಿ ಎಂದು ಉತ್ತರ ಕೊಡುತ್ತಾನೆ. ಧರ್ಮಶಾಸ್ತ್ರದ ಕೋಟೆಯನ್ನು ಅದ್ರಾಮನೆಂಬ ಪಡ್ಡೆಹುಡುಗ ಭೇದಿಸಿ ಹೊರಟಿರುವುದನ್ನು ಕಂಡು ಗಾಂಧಿವಾದಿಗಳಿಗೆ ಸಂತೋಷವಾಗುತ್ತದೆ. ದ್ರೌಪದಿಗೆ ವೈವಾಹಿಕ ಜೀವನಹೊಂದನ್ನು ಪ್ರಾಪ್ತಿಮಾಡಬೇಕೆಂಬ ತುಡಿತ ಹೆಚ್ಚಾಗುತ್ತದೆ. ಕರ್ನಾಡರು ಕೇರಿ ಕೇರಿ ತಿರುಗುತ್ತಾರೆ. ಇಲ್ಲಿಂದಲ್ಲೇ ಗೋಡೆಯುರುಳಿಸಬೇಕು ಎಂದು ನಿರ್ಧರಿಸುತ್ತರೆ.

ಮಾರಪ್ಪಶೆಟ್ಟಿ ಗಾಂಧಿ ವಿಚಾರಗಳಲ್ಲಿ ತನ್ನನ್ನು ತೊಡಗಿಸಿಕೊಂಡವನ್ನು ಈತನಿಗೆ ಜೀವನದ ತುಂಬಾ ದೇಶದ ಚಿಂತೆ "ಖಾದಿಯೇ ತನ್ನ ಹೆಂಡತಿ-ದೇಶವೇ ತನ್ನ ತಾಯಿ ಎಂದು ಖಾದಿ ಪ್ರಚಾರ ಅಸಹಕಾರ ಚಳುವಳಿ ಪಾನನಿಷೇಧವನ್ನು ಕುರಿತು ಗಾಂಧಿ ವಿಚಾರಗಳನ್ನು ಸಾಮಾನ್ಯ ಜನರಿಗೆ ಮುಟ್ಟಿಸಿ, ಸ್ವಾತಂತ್ರ್ಯ ಭಾರತದ ಬಗ್ಗೆ ಜಾಗೃತಿ ಮೂಡಿಸಲು ಊರುರು ತಿರುಗುವುದೇ ಈತನ ಕೆಲಸ ತಾಯಿ ಸೂರಕ್ಕನ ಯಾವ ಗೋಣಗಾಟಕ್ಕೂ ಜಗ್ಗದೇ ತನ್ನ ಕಾಯಕವನ್ನು ಮುನ್ನೆಡಿಸಿಕೊಂಡು ಬಂದವನು.

ಜಾರಿಗೆ ಚಿಟ್ಟಿನ ಸುಬ್ಬಯ್ಯಶೆಟ್ಟರ ಮಗಳು ಸೌಂದರ್ಯವತಿ ಗುಣವತಿಯಾಗಿದ್ದರೂ ಆಕೆಗೆ ಗರ್ಭಕೋಶವಿಲ್ಲದ ಕಾರಣ ಅವಳಿಗೆ ಮದುವೆ ಮಾಡುವಂತಿಲ್ಲ. ಮನೆಯವರೆಲ್ಲ ಮೊದಲು ಅನುಕಂಪದಿಂದ ನೋಡಿಕೊಳ್ಳುತ್ತಿದ್ದವರು. ಕ್ರಮೇಣ ಅವಳು ಎಲ್ಲರಿಂದ ನಿರ್ಲಕ್ಷಿಸಲ್ಪಟ್ಟವಳಾಗಿ ದಾರುವಿಗೆ ಮನಸ್ಸು ಇಲ್ಲ. ಮಾತು ಇಲ್ಲ ಎಂಬಂತೆ ವರ್ತಿಸುತ್ತಿದ್ದರು. ಕಿತ್ತು ತಿನ್ನುವ ಏಕಾಕಿತವನ್ನು ಮನಸ್ಸಿನ ಮಧುರ ಭಾವನೆಗಳನ್ನು ನೈಸರ್ಗಿಕವಾದ ದೈಹಿಕ ಒತ್ತಡಗಳನ್ನು ಅದುಮಿಡಲಾರದೆ ಹೆತ್ತವರೊಡನೆ, ಒಡಹುಟ್ಟಿದವರೊಡನೆ ಮನಸ್ಸನ್ನೂ ಬಿಚ್ಚಡಲಾಗದೆ ಜೀವಂತ ಶವವಾಗಿ ಬದುಕಿದ್ದಳು. ದಾರುವಿನ ಈ ದಾರುಣಾವಸ್ಥೆಯನ್ನು ನೋಡಲಾಗದೆ ಅಹಳ ತಾಯಿ ಆತ್ಮಹತ್ಯೆ ಮಾಡಿಕೊಂಡಳು. ದಾರು ಯಾವ ತಪ್ಪು ಮಾಡದೆ ಅನುಭವಿಸುತ್ತಿರುವ ಇಂಥ ಶಿಕ್ಷೆಯ ಬಗ್ಗೆ ಈ ಮೊದಲು ವಿಪರೀತ ಅನುಕಂಪವುಳ್ಳವನಾಗಿದ್ದ ಮಾರಪ್ಪ, ತಾಯಿಯ ಮರಣದ ಕಾರಣವಾಗಿ ಅವಳ ನೋವಿಗೆ ಪರಿಹಾರ ಸೂಚಿಸುವಂತೆ ಮದುವೆಯಾಗುವ ನಿರ್ಧಾರ ಮಾಡಿದ ದಾರುವಿನ ಬಗೆಗಿನ ನಿರ್ಧಾರ ಆತನ ವೈಯುಕ್ತಿಕ ಬದುಕಿಗೆ ಸಂಬಂಧಪಟ್ಟಿದ್ದರೂ ನೆಮ್ಮದಿಗೆಟ್ಟ ಒಂದು ಕುಟುಂಬವನ್ನೇ ಉದ್ಧಾರ ಮಾಡುವಂಥದ್ದು ಒಂದು ದುರದೃಷ್ಟ ಹೆಣ್ಣಿಗೆ ಬದುಕು ನೀಡುವಂತಹದ್ದು ಮುರುಟಿ ಸಾಯುತ್ತಿರುವ ಒಂದು ಮನಸ್ಸಿಗೆ ಚೈತನ್ಯ ನೀಡುವಂತದ್ದು, ಗಾಂಧಿಯವರ ಸಮಾಜೋದ್ಧಾರದ ದಾರಿಯನ್ನು ತಾನೇ ತುಳದು ತೋರುವನೆಂಬ ಛಲವರಿಬೇಕೆಂಬ ಗುತ್ತಿನ ಶೆಟ್ರುಗಳೆಲ್ಲಾ ಸೇರಿ ಯೋಚಿಸಿದರು. ಈತನನ್ನು ಬೇರೆ ಬೇರೆ ರೀತಿಯಿಂದ ಪ್ರಶ್ನಿಸಿ ಪರೀಕ್ಷಿಸಿ ಅನಂತರ ದಾರುವಿನೊಂದಿಗೆ ಮದುವೆ ಮಾಡಿದರು. ಮಾರಪ್ಪನಿಗೆ ಬೇಕಾದುದ್ದು ಆಕೆಯ ನೆಮ್ಮದಿ ತುಂಬಿದ ನಗುಮುಖದಷ್ಟೇ, ಒಬ್ಬ ಹತ ಭಾಗ್ಯಯ ಆರುತ್ತಿರುವ ಬದುಕಿನ ಬೆಳಕನ್ನು ಊಹಿಸುವುದಷ್ಟೇ ಮದುವೆಯ ಭಾಗ್ಯವೇಯಿಲ್ಲದೆ

ಕೊರಗುತ್ತಿದ್ದವಳಿಗೆ ಅವಳಿಗಿಂತ ಹೆಚ್ಚಿನದಾಗಿ ಆಡಿಕೊಳ್ಳುವ ಜನರನ್ನು ಸುಮ್ಮನಿರಿಸುವುದು ಅವನ ಮುಖ್ಯ ಉದ್ದೇಶವಾಗಿತ್ತು.

ಗಾಂಧಿಜೀ ಸತ್ಯ, ಅಹಿಂಸೆ, ಶಾಂತಿ ಎಂಬ ಆಯುಧಗಳನ್ನು ಇಟ್ಟುಕೊಂಡು ಬ್ರಿಟಿಷರ ವಿರುದ್ಧ ರಾಷ್ಟ್ರಮಟ್ಟದಲ್ಲಿ ಹೋರಾಡುತ್ತಿದ್ದರು. ಅವರ ಅಸಂಖ್ಯಾತ ಅನುಯಾಯಿಗಳು ದೇಶದಾದ್ಯಂತ ಗಾಂಧಿಜೀಯವರ ಚಿಂತನೆ, ವಿಚಾರಗಳ ಬಗ್ಗೆ. ಸ್ವತಂತ್ರ ಭಾರತದ ಅಸ್ತಿತ್ವದ ಅಗತ್ಯವನ್ನು ಬ್ರಿಟಿಷರ ದಬ್ಬಾಳಿಕೆಯನ್ನು ಘೋಷಣೆಯನ್ನು ಎದುರಿಸುವುದನ್ನು ಹಳ್ಳಿ-ಹಳ್ಳಿಗಳಲ್ಲಿ ಸಾಮಾನ್ಯ ಜನರಿಗೆ ತಿಳಿಸುವ ಪ್ರಯತ್ನವನ್ನು ಮಾಡುತ್ತಿದ್ದರು. ಕಾರ್ನಾಡು ಸದಾಶಿವರಾಯರು ತಿಂಗಳರಾಯರು, ತೌಡುಶೆಟ್ಟಿ, ಮಾರಪ್ಪ, ಅದ್ರಾಮ, ಮೊದಲಾದವರು ಗಾಂಧಿ ಬಿಚಾರಗಳಿಂದ ಪ್ರಭಾವಿತರಾಗಿದ್ದರು. ಅಸಹಕಾರ ಚಳುವಳಿ, ಪಾನನಿಷೇಧ, ಖಾಲಿ ಪ್ರಚಾರ ಹರಿಜನ ಉದ್ಧಾರ, ಇದೇ ಮೊದಲಾದ ಕಾರ್ಯಗಳನ್ನು ಮಾಡಲು ಉಳಿದವರನ್ನು ಎಚ್ಚರಿಸುವ ಕೆಲಸವನ್ನು ಗ್ರಾಮಗಳಲ್ಲಿ ಮಾಡುತ್ತಿರುತ್ತಾರೆ. ಗಾಂಧಿಚಿಂತನಗಳು ಎಲ್ಲಾ ಹಳ್ಳಿಗಳ ಜನ-ಮನದಲ್ಲೂ ನೆಲೆಯೂರುವಂತೆ ಮಾಡುತ್ತಿದ್ದರು. ಫಲಪ್ರದವಾಗಿ ಸಾಮಾನ್ಯ ಜನರು ಈ ವಿಷಯಗಳ ಕಡೆ ಕಿವಿಗೊಟ್ಟು ಕೇಳುವಂತಾದರು. ಸ್ವರಾಜ್ಯ ಸಂಪಾದನೆಯ ದೀಕ್ಷೆ ಪಡೆದ ಮಾರಪ್ಪ ತಿಂಗಳ ರಾಯರು ಮೊದಲಾದವರು ಗಾಂಧಿ ಮಂಗಳೂರು ಪೇಟೆಗೆ ಆಗಮಿಸುತ್ತಿರುವುದನ್ನು ತಿಳಿಸಿದರು. ಆಗ ಊರಿಗೆ ಊರೇ ಆಸಕ್ತಿ ಕುತೂಹಲ ಬೆರಗುಗಳಿಂದ ಗಾಂಧಿಯನ್ನು ನೋಡಲು ಹೊರಡುತ್ತಾರೆ.

ಗಾಂಧಿ ತಮ್ಮ ಭಾಷಣದಲ್ಲಿ ಮುಖ್ಯವಾಗಿ ಪ್ರಸ್ತಾಪಿಸುವುದು ಅಸಹಕಾರ ಚಳುವಳಿಯನ್ನು ಹೇಗೆ ಮಾಡಬೇಕೆಂಬುದು ಅದಕ್ಕಾಗಿ ಮಾಡಬೇಕಾದ ಕೆಲಸಗಳು ಇಂತಿವೆ. ಬ್ರಿಟಿಷ್ ಸರ್ಕಾರ ಕೊಡುವ ಬಿರುದುಗಳನ್ನು ಆತ್ಮಾಭಿಮಾನವುಳ್ಳ ಪ್ರತಿಯೊಬ್ಬರೂ ತಿರಸ್ಕರಿಸಬೇಕು. ಪರಿಶುದ್ಧವಾದ ನ್ಯಾಯ ಕೊಡದ ಪರಂಗಿಯರವರ ಕೋರ್ಟ್‌ಗಳಿಗೆ ಬಹಿಷ್ಕಾರ ಹಾಕಬೇಕೆಂದು ಸರಕಾರಿ ಶಾಳೆಗಳಿಗೆ ಅಥವಾ ಸರಕಾರದಿಂದ ಹಣ ಪಡೆಯುವ ಶಾಲೆಗಳಿಗೆ ಮಕ್ಕಳನ್ನು ಕಳುಹಿಸಕೊಡದೆಂದೂ ಕೇಳಿಕೊಂಡರು. ಜನರಲ್ಲಿ ಸ್ವದೇಶಿ ಜಾಗೃತಿ ಮೂಡಿಸಲು ಪ್ರಯತ್ನಿಸಿದರು. ಮಂಗಳೂರು ಪ್ರಾಂತ್ಯಕ್ಕೆ ಗಾಂಧಿಜೀಯ ಅಪರಾವತಾರವಾಗಿದ್ದರು. ಕಾರ್ನಾಡು ಸದಾಶಿವರಾಯರು ಇವರು ಶೂದ್ರ ಜನಾಂಗದ ಬೌದ್ಧಿಕ ಸರ್ವಾಧಿಕಾರಿ ಆಗಿದ್ದರು. ನಮ್ಮ ಮನೆಯ ಅಕ್ಕಿಯನ್ನು ನಾವೇ ಬೇಯಿಸಿ ತಿನ್ನೋಣ ಅಪ್ಪು ಬೇಯಿಸಿ ಕೊಟ್ಟು ನಮಗೆ ಮಾರೋದು ಬೇಡ, ಬೇರೆಯವರ ಹಂಗು ನಮಗ್ಯಾಕೆ ಎಂದು ಸರಳವಾಗಿ ಖಾದಿವಸ್ತ್ರವನ್ನು ನಾವೇ ನೂಲು ಧರಿಸಬೇಕು ಎಂಬುದನ್ನು ವಿವರಿಸುತ್ತಿದ್ದರು.

2ನೇ ಬಾರಿಗೆ ಗಾಂಧಿಜೀ ಮಂಗಳೂರಿಗೆ ಬಂದಾಗ ಊರಿನ ಜನರು ಅವರನ್ನು ಅವತಾರ ಮರುಷ ಎಂಬಂತೆ ಭಾವಿಸಿದರು. ಆದ್ದರಿಂದಲೇ ಬದ್ಧ ವೈರಿಗಳಾದ ಹೆಬ್ಬಾರರ ನೇತೃತ್ವದ ವಿಪ್ರ ಪಡೆಯೂ ಆ ಗಾಂಧಿಯನ್ನು ಒಮ್ಮೆ ನೋಡಿ ಬರುವ ಎಂದು ಹೊರಬಿದ್ದರು. ಗಾಂಧಿ ತಮ್ಮ ಭಾಷಣದಲ್ಲಿ ಹಿಂದೂಗಳು ಮುಸಲ್ಮಾನರು ಒಬ್ಬರ ತಲೆಯೊಬ್ಬರು ಒಡೆಯುತ್ತಿದ್ದಾರೆ.

ಹಿಂದೂ-ಮುಸ್ಲಿಂ ವೈಷವ್ಯ ಹೀಗೆ ಮುಂದುವರಿಯಬಾರದು ನಾವೆಲ್ಲರೂ ಭಾರತವೆಂಬ ಸುಂದರ ತೋಟದಲ್ಲಿ ಅರಳಿರುವ ಹೂವುಗಳು ಪರರು ಬಂದು ಈ ತೋಟವನ್ನಾಗಲಿ, ಗುಲಾಬಿಯನ್ನಾಗಲಿ ಹಾಳುಗೆಡವಲು ಬಿಡಬಾರದು ನಮ್ಮ ನಿಮ್ಮೊಳಗಿನ ವೈಷಮ್ಯವನ್ನು ಆದಷ್ಟು ಬೇಗ ತೊಡೆದು ಹಾಕಿ ನಾವು ಮಧುರ ಸಂಬಂಧ ಬಳಸಿಕೊಳ್ಳಬೇಕೆಂದೂ ಹೇಳಿದರು ಹಿಂದೂ-ಮುಸ್ಲಿಂರ ಸಾಮರಸ್ಯವನ್ನು ಕುರಿತು ಗಾಂಧೀಜಿ ಮಾತನಾಡುತ್ತಿದ್ದರೆ ಕೇಳುತ್ತಿದ್ದ ವಿಪ್ರಪಡೆ ಕುಳಿತಲ್ಲೇ ಕೂರಲಾಗದೆ ಅಸಹನೆಯಿಂದ ಸಿಡಿಮಿಡಿಗೊಂಡರು.

ಖಾದಿಯನ್ನು ಕಡ್ಡಾಯವಾಗಿ ತೊಡಲೇಬೇಕೆಂದಾಗ ಅಲ್ಪ ಬೆಲೆಗೆ ನುಣುಪು ಬಟ್ಟೆ ಸಿಗುವಾಗ ಹೆಚ್ಚಿನ ಹಣತೆತ್ತು ಖಾದಿಕೊಳ್ಳಲು ನಮ್ಮ ಮಂಡೆಯಲ್ಲೇನೊ ಒಣಸಗಣಿ ತೂಬಿದ್ಯಾ ಎಂದು ತಮ್ಮ ತಮ್ಮಲ್ಲೇ ಕುಹುಕವಾಡಿಕೊಂಡರು. ಬ್ರಾಹ್ಮಣರ ಮೌಢ್ಯತೆಗಳನ್ನು ತಿದ್ದುಬೇಕಾದರೆ ಇನ್ನೊಂದು ಜನ್ಮವೆತ್ತಿ ಬರಬೇಕೆಂಬುದು ಇವರನ್ನು ನೋಡಿದಾಗ ಸತ್ಯವೆನಿಸುತ್ತದೆ. ಆದರೆ ಇದೇ ಜನಾಂಗದವರಾದ ಕಾರ್ನಾಡು ಸದಾಶಿವರಾಯರು ವ್ಯಕ್ತಿತ್ವ ಘನತೆ ತರುವಂಥದ್ದಾಗಿದೆ.

ಸ್ವರಾಜ್ಯ ಪರರಾಜ್ಯ ಎಂಬ ಕನಿಷ್ಠ ತಿಳುವಳಿಕೆಯೂ ಇಲ್ಲದ ಹಲವಾರು ಕೆಳವರ್ಗದ ಜನತೆ ಗಾಂಧಿ ಒಬ್ಬಾತ ಅವತಾರ ಪುರುಷನೋ, ಸಮಾಜ ಪರವರ್ತಕನೋ ಎಂಬ ಕಲ್ಪನೆಯಿಂದಲ್ಲೇ ಗಾಂಧಿಗೆ ಶರಣು ಹೋಗುತ್ತಾರೆ. ಗಾಂಧಿಯನ್ನು ನೋಡಲು ಪೇಟೆಗೆ ಹೋಗಕೂಡದು ಎಂದು ಗದರಿಸಿದ ಹೆಬ್ಬಾರರಿಗೆ ಅಂತಪ್ಪ ಹೀಗೆ ಗೊಣಗಿಕೊಳ್ಳುತ್ತಾನೆ. ಆ ಗಾಂಧಿ ಒಮ್ಮೆ ಇವ್ರಿಗೆ ಹೀಗೆ ಕಣ್ಣು ಬಿಟ್ಟರೆಂದ್ರೆ ಸುಟ್ಟು ಭಸ್ಮ ಕೊರಗದ ಪಿತುವಿನಿಂದ ಪುಟ್ಟಮ್ಮಕ್ಕನವರೆಗೆ ಗಾಂಧಿನಿಧಿಗೆ ಹಣ ಒಡವೆಯನ್ನು ಅರ್ಪಿಸುವುದನ್ನು ಕಂಡಂತಹ ಗುತ್ತಿನೊಡೆಯರಿಗೆ ಆಶ್ಚರ್ಯವಾಗುತ್ತದೆ. ಈ ಗಾಂಧಿ ಅದೆಂಥಾ ಮೋಡಿಗಾರನೋ ಸಣ್ಣವರು ದೊಡ್ಡವರೆನ್ನದೆ ಮೇಲು ಕೀಳೆನ್ನದೆ ಎಲ್ಲಾ ಮನಸ್ಸಿಗೂ ಲಗ್ಗೆ ಹಾಕಿ ಹೀಗೆ ಕುಣಿಸುತ್ತಿದ್ದಾನಲ್ಲ ಎಂದು ಹೇಳುವಲ್ಲಿ ಯಾವುದೇ ಉತ್ತೇಕ್ಷೆ ಕಂಡುಬರುವುದಿಲ್ಲ. ಈ ಕೃತಿಯಲ್ಲಿ ಜಾತಿ ಸಂಘರ್ಷವನ್ನು ಕುರಿತು ಪ್ರಸ್ತಾಪವಿದೆ. ಬ್ರಾಹ್ಮಣನು ಶ್ರೇಷ್ಠ ಆತ ಏನೂ ಮಾಡಿದರೂ ರಾಜಕೀಯ ಲಾಭದ ಉದ್ದೇಶಕ್ಕಾಗಿ ವ್ಯವಸ್ಥೆಗಳನ್ನು ರೂಪಿಸುತ್ತಾನೆ. ಪಟೇಲನಾದ ಈತ ಉಳಿದೆಲ್ಲ ವರ್ಗಗಳನ್ನು ತನ್ನ ಹಿಡಿತದಲ್ಲಿಟ್ಟುಕೊಳ್ಳಬೇಕೆಂದೂ ಅಹಂ ಇರುವವರು ಹಳ್ಳಿಯ ಶ್ರೀಮಂತರೆನಿಸಿದ ಪಾಂಡುಶೆಟ್ಟಿ, ತೌಡುಶೆಟ್ಟಿ ಇವರ್ಯಾರು ಹೆಬ್ಬಾರರಿಗೆ ಪ್ರತಿಯಾಗಿ ಮಾತನಾಡಲಿಚ್ಚಿಸುವವರಲ್ಲ. ಹಾಗೆಂದಾಕ್ಷಣ ಅವರೆಲ್ಲರೂ ಹೆಚ್ಚಾರರ ಮೇಲೆ ಭಯ, ಭಕ್ತಿ, ವಿಶ್ವಾಸ. ಗೌರವ ತುಂಬಿ ತುಳುಕುತ್ತಿದೆಯೆಂದಲ್ಲಿ ಸಾಕಷ್ಟು ಅಸಮಾಧಾನ, ಸಿಟ್ಟು, ಬೇಸರ, ಅವರೊಳಗಿದೆ ಬ್ರಾಹ್ಮಣ ಮೇಲ್ಜಾತಿ ಎಂಬ ದಾಕ್ಷಿಣ್ಯ ಹಾಗೂ ಜನಬಲ, ಹಣಬಲ, ತೋಳ್ಬಲಗಳಿರುವ ಪ್ರಬಲವಾದ ಬಂಟರ ಜಾತಿಗೆ ಸಂಧರ್ಭಾನುಸಾರಿಯಾದ ಬುದ್ದಿಬಲ ನೀಡುತ್ತಾರೆ ಎಂಬ ಕಾರಣಕ್ಕೂ ಏನೋ ನೇರವಾಗಿ ಹೆಚ್ಚಾರರ ಮಾತಿಗೆ ಪ್ರತಿಯಾಡುವುದಿಲ್ಲ. ಇವರಿಗೆ ಕಂಬಳದ ಊಟದಲ್ಲಿನ ಪಂಕ್ತಿ ನ್ಯಾಯಾದ ಬಗ್ಗೆ ಅತೃಪ್ತಿ ಇದ್ದರೂ ಹೆಬ್ಬಾರರಿಗೆ ಹೇಳುವುದಿಲ್ಲ. ಕಂಬಳದ ಕೆಲಸಕ್ಕೆ ಇನ್ನಿಲ್ಲದಂತೆ ಜೀವ ತೇಯುವವರು ಶೂದ್ರರು. ಆದರೆ ಕಂಬಳದ ಕೋಣಗಳಂತೆ ಮರ್ಯಾದೆಯಿಂದ ಹೊಟ್ಟೆ ಬಿಗಿಯುವಷ್ಟು ಚಾವಡಿಯಲ್ಲಿ. ಕೂತು ಉಣ್ಣುವುದು ಮಾತ್ರ ಬ್ರಾಹ್ಮಣರು

ಇದೆಂತಹ ನ್ಯಾಯ ಎಂದು ತಮ್ಮ ತಮ್ಮಲ್ಲೇ ಗೊಣಗಿಕೊಳ್ಳತ್ತಾರಷ್ಟೇ, ಆದರೆ ಜಾತಿ ಧರ್ಮವನ್ನು ಕುರಿತ ಕೃತಿ ಆಶಯ ವ್ಯಕ್ತವಾಗುವುದು. ಜನರ ಮಾತಿನಲ್ಲಿ ದೈವ ಜಮಾದಿ ಮುಸ್ಲಿಂ ಅದ್ರಾಮನಿಗೆ ಹೂಗಂಧ ನೀಡಿ ಹಾರೈಸಿದಾಗ ದೈವಕ್ಕೆ ಜಾತಿ ಬೇಧವಿಲ್ಲ. ಅದೆಲ್ಲ ಇರುವುದು ರಾಕ್ಷಸ ಜಾತಿಯ ಮನುಷ್ಯರಿಗೆ ಎಂದು ಹೇಳುವುದು ಸರ್ವಕಾಲಿಕ ಸತ್ಯವೆನಿಸುತ್ತದೆ.

ಸುಧಾರಣೆಗೆ ಸರ್ವಸಮಾನತೆಗೆ ಕೇವಲ ಬ್ರಾಹ್ಮಣ ಜಾತಿಯೇ ಅಡ್ಡಿಯಿಲ್ಲ ಶೂದ್ರವರ್ಣಗಳಲ್ಲೇ ತಾರತಮ್ಯ ಮನೋಭಾವನೆ ತೊಡೆದು ಹಾಕಲಾರದಷ್ಟು ಬಲವಾಗಿದೆ. ಮುಗೇರ, ಮೂಲ್ಯ, ಪೂಜಾರಿ, ಮೈಲಿ, ಆಚಾರಿ, ಬೆಸ್ತರು, ಶೆಟ್ರುಗಳೆನ್ನೆಲ್ಲ ದೇವಾಲಯದ ಒಳನುಗ್ಗಿಸಿ ಸಹಪಂಕ್ತಿಭೋಜನ ಏರ್ಪಡಿಸಿದ್ದರು. ಆದರೆ ಆ ಬ್ರಾಹ್ಮಣ ಶೂದ್ರ ಜಗತ್ತಿನೊಳಗೆ ಜಾತಿ ಭೇದಗಳ ವಿಷ ಬ್ರಾಹ್ಮಣರಿಗಿಂತ ಸ್ವಲ್ಪ ಹೆಚ್ಚಾಗಿಯೇ ಇದೆಯೆಂದು ಮೌನವಾದರು. ಈ ಅಂತಃ ಕಲಹವನ್ನು ಕಂಡು ಇದು ತಮ್ಮಿಂದ ತೊಳೆಯಲಾಗದ ಸಾಮಾಜಿಕ ಕೊಳೆ ಮುಂದೆಯೂ ಇರುತ್ತದೆ. ಇದನ್ನು ತಕ್ಷಣದಲ್ಲಿ ನಿವಾರಿಸಲು ಬರುವುದಿಲ್ಲವೆಂಬ ತಿಳುವಳಿಕೆ ವೇದ್ಯವಾಗುತ್ತದೆ. ಆದರೆ ಈ ಸಹಭೋಜನವನ್ನು ಮಾಡುವಂತೆ ಪ್ರೇಶಿಪಿಸಿದವರು ಗಾಂಧಿ ಎಂದು ತಿಳಿದು ಪಿತು ಅವರನ್ನು ಕಾಣಲು ಪರಿತಪಿಸುತ್ತಾನೆ. ಶೂದ್ರವರ್ಗದ ಪ್ರತಿನಿಧಿಯಾಗಿ ಸಹ ಪಂಕ್ತಿ ಭೋಜನವನ್ನು ಅಪ್ಪಾಯ ಮಾನ್ಯತೆಯಿಂದ ಒಪ್ಪಿಕೊಂಡವನು. ಪಿತುವೊಬ್ಬನೇ ಬೇರೆಯವರು ಗಾಂಧಿನಿಧಿಗೆಂದು ಕೂಡ ಹಣವನ್ನು ಹೆಬ್ಬಾರರು ಸ್ವಾಹ ಮಾಡಿದರೆ ಪಿಜನಮೂಲ್ಯ ತನ್ನ ಬೆಳ್ಳಿ ಮುರುವನ್ನು ಕೊಡಲು ಮುಂದಾಗುತ್ತಾರೆ. ಅಂತಪ್ಪ, ಕೂಸಮೈಲಿ, ಮಂಜಪ್ಪ ಕಳ್ಳ ಕುಡಿಯುವುದನ್ನು ನಿಲ್ಲಿಸಿ ಆ ಹಣವನ್ನು ಗಾಂಧಿನಿಧಿಗೆ ಅರ್ಪಿಸುವುದು ಜಾತಿಯಿಂದ ಮೇಲ್ವರ್ಗದವರೆನಿಸಿದ ಹೆಬ್ಬಾರರ ವ್ಯಕ್ತಿತ್ವವನ್ನು ನಾಚಿಸುವಂತಹದ್ದು.

ಅಂದರೆ ಗಾಂಧಿಯವರು ಯಾರಾದರೂ ಮಹಿಳೆಯರಿಗೆ ಈ ದರಿದ್ರ ನಾರಾಯಣನಿಗೆ ತಮ್ಮ ಒಡವೆ ಕೊಡಬೇಕೆಂದೂ ಅನಿಸಿದ್ದಲ್ಲಿ ಅದನ್ನು ಈ ಶುಭಗಳಿಗೆಯಲ್ಲಿ ಕೊಡಬಹುದು. ಆ ನಿಮ್ಮ ಒಡವೆಗಳು ದೇಶದ ಹದಿನಾರು ಸಾವಿರ ಬಡಸೋದರಿಯರಿಗೆ ಒಂದು ದಿನದ ಊಟ ಒದಗಿಸಬಲ್ಲದು ಎಂದು ಅನ್ನುತ್ತಿದ್ದಂತೆ ಹೆಂಗಸರೆಲ್ಲ ಭೂತೈತಾಳರ ಆರತಿ ತಟ್ಟೆಗೆ ಮುಗಿ ಬೀಳುವ ಭಕ್ತವೃಂದದಂತೆ ಗಾಂಧಿಯವರತ್ತ ಮುಗಿಬಿದ್ದರು. ಗಾಂಧಿಯವರು ಸಂತೋಷಚಿತ್ತದಿಂದ ಅದನ್ನು ಸ್ವೀಕರಿಸುತ್ತಿದ್ದರು.

ಅತ್ತ ಬ್ರಾಹ್ಮಣ ಸಮುದಾಯದವರಾದ ಹೆಬ್ಬಾರರ ಮನೆಯವರು ಗಾಂಧಿಯವರು ಆಭರಣ ಕೇಳುತ್ತಿದ್ದಂತೆ ಇತ್ತ ಸಭೆಯಲ್ಲಿ ತಳವೂರಿದ್ದ ರುಕುಣಿಯಮ್ಮ ಶಾರದಮ್ಮನವರಿಗೆ ಭಯದಿಂದ ಎದೆಯೊಳಗೆ ಉಸಿರು ಸಿಕ್ಕಿಹಾಕಿ ಕೊಂಡಂತಾಗಿತ್ತು ಗಾಂಧಿಯವರು ಹೆಂಗಸರ ಒಡವೆ ನೋಡಿದರೆ ಸಂಕು ತಟ್ಟನೆ ಕರೆದುಬಿಟ್ಟು ಅವನ್ನೆಲ್ಲ ಕಳಚಿಕೊಡೆಂದೂ ಕೇಳುತ್ತಾರಂತೆ ಎಂದು ಯಾರೊ ಮೊದಲೇ ರುಕುಣಿಯಮ್ಮ ಹಾಗೂ ಶಾರದಮ್ಮನಿಗೆ ಭಯ ಹುಟ್ಟಿಸಿದ್ದರಿಂದ ಅವರಿಬ್ಬರೂ ಗಾಂಧಿಯ ಹೆಸರಿಕೆಯಿಂದ ಬಿಳುಚಿಕೊಂಡರು ಇದು ಅವರ ಮನಸ್ಸಿನ ಅಸಹಾಯತೆಯನ್ನು ತೆರೆದಿಡುತ್ತದೆ. ಹಾಗೂ ಮೇಲ್ಜಾತಿಯವರ ನಡೆಯುವ ರೀತಿ–ನೀತಿಯಿಂದ ಅಲ್ಪಜಾತಿಯವರ ಹಾಗೇ ಕಾಣಿಸುವಂತದ್ದು ಹಾಗೂ ಇದು ಅವರ ವ್ಯಕ್ತಿತ್ವಕ್ಕೆ ದಕ್ಕೆಯನ್ನುಂಟು ಮಾಡುತ್ತದೆ.

"ಶರೀರೆ ಛಿದ್ರ ಭೂತೇ ವ್ಯಾಧಿಗ್ರಸ್ಥೆ ಕಳೇರವೇ" "ಔಷಧಂ ಜಾಹ್ನವೀ ತೋಯಾ ವೈದ್ಯೋ ನಾರಾಯಣ ಹರೀ – ಎಂದು ಪಠಣ ಮಾಡುವ ಹೆಬ್ಬಾರರಿಗೆ ಶರೀರದ ಅನಿಶ್ಚಿತತೆಯ ಅರಿವೆ ಇಲ್ಲ.

ಪ್ರತಿ ಯುಗಾದಿಗೆ ಹಸಿರು ತರಕಾರಿ ಹೊರೆ ಕಾಣಿಕೆ ಜೊತೆ ತಾವು ಕೇಳಿದಷ್ಟು ಅಕ್ಕಿ ಮುಡಿ ಮನೆಗೆ ಬಂದು ಬಿದ್ದರೆ ಸಾಕು. ಯುಗಾದಿಯ ಹಬ್ಬಕ್ಕೆ ಸಿದ್ದತೆ ನಡೆಯುತ್ತಿದ್ದಂತೆ ಪ್ರಭವ ಸಂವತ್ಸರ ಮುಗಿದು ವಿಭವವೂ ಸಂವತ್ಸರವೂ ಕಾಲಿಟ್ಟಿತ್ತು. ಯುಗಾದಿಯ ಆಚರಣೆ ಕೊಂಕಣಿಗಳದ್ದು ಆ ಯುಗಾದಿಯ ಹಿಂದೆಯೇ ಬ್ರಾಹ್ಮಣರ ಹಾಗೂ ಅವರಡಿ ಇರುವ ಇತರ ಸಮಸ್ತ ಶೂದ್ರರ ಯುಗಾದಿಯು ಬಂದಿತು. ಅಂದು ಹೆಬ್ಬಾರರ ಅಂಗಳದಲ್ಲಿ ಮಾಮುಲು ಬಿಡಿ ಒಕ್ಕಲಿನವರಲ್ಲದೆ, ಮೂಲಗೇಣಿ, ಬಾಲಗೇಣಿ, ಒಕ್ಕಲಿನವರ ಬಿರುಸಿನ ಓಡಾಟವಿತ್ತು. ಹೆಬ್ಬಾರರು ಪ್ರಾತಃ ಸಂಧ್ಯಾವಂದನೆ ಮುಗಿಸಿ, ನಿತ್ಯದ ಪೂಜೆ ಮಾಡುತ್ತಿದ್ದಾರೆ. ಆ ನಿತ್ಯದ ಪೂಜೆ ಮುಗಿದೊಡನೆ ಮತ್ತೊಂದು ಯುಗಾದಿಯ ವಿಶೇಷ ಪೂಜೆಯಿದೆ ಅಂದರೆ ಮಾರನೆದಿನ ಗೇಣಿಗೆ ಸಂದಾಯ ಮಾಡುವ ದಿನವಾಗಿರುತ್ತದೆ.

ಹೆಬ್ಬಾರರು ಯುಗಾದಿಯ ಹಬ್ಬವನ್ನು ವಿಶೇಷವಾಗಿ ಆಚರಿಸಿದರು ನಂತರ ಬಂಗಾರದಂಚಿನ ಮುತ್ತಿನ ಬಣ್ಣದ ದೋತ್ರದ ಮೇಲೆ ಅದೇ ಬಣ್ಣದ ರೇಷ್ಮೆ ನಿಲುವಂಗಿ ಧರಿಸಿಕೊಂಡು ಒಳಗಿಂದ ಗುಟುಕು ಹಾಕಿಕೊಂಡು ಚಾವಡಿಗೆ ಬಂದು ತನ್ನ ಒಕ್ಕಲ ಮಕ್ಕಳ ಗೇಣಿ ಪತ್ರಗಳಿರುವ ಪಿಠಾರಿಯನ್ನು ಬಿಡಿಸಿಟ್ಟರು. ಲೆಕ್ಕಪತ್ರ ತೆಗೆಯುದಕ್ಕಿಂತ ಮೊದಲು ಒಮ್ಮೆ ಜಿರಲೆಗಳ ದಿಗಿಣ ನಡೆಯಿತು. ಹೆಬ್ಬಾರರ ದೋತ್ರದೊಳಗೊಂಡು ಜಿರಲೆ ನುಗ್ಗಿ ಇನ್ನಿಲ್ಲದ ದಾಂಧಲೆ ನಡೆಸಿ ಅಂಗಳದಲ್ಲಿದ್ದ ಆಳುಗಳಿಗೆ ಪುಕ್ಕಟೆ ಮನರಂಜನೆ ನೀಡಿತು. ಆಳುಗಳು ತಮಗೆ ಉಕ್ಕಿ ಬರುವ ನಗುವನ್ನು ಅಲ್ಲೇ ಬಿಗಿದಿಟ್ಟುಕೊಂಡು ಗಂಟು ಮುಖದಲ್ಲೇ ಚಾವಡಿಯ "ವೈಭವ"ವನ್ನು ದಿಟ್ಟಿಸಿದರು. ಜಿರಲೆಗಳ ವಿಲೇವಾರಿಯಾದೊಡನೆ ಹೆಬ್ಬಾರರು ಲೆಕ್ಕಪತ್ರಗಳಿಗೆ ಮುಖಕೊಟ್ಟರು.

ಒಡೆಯನ ಧೂರ್ತತೆಯ ಅರಿವಿದ್ದರೂ ಒಡೆಯಲಾಗದೊಂದು ಒಡವೆ ಎಂದು ತೆಪ್ಪಗಾಗುತ್ತಿದ್ದರು. ಈ ಮಾರಶೆಟ್ಟಿಯ ಪ್ರಭಾವದಿಂದ ತಮ್ಮ ಧಣಿಗಳಾದ ಹೆಬ್ಬಾರರು ವಿರೋಧಿಸಿಯಾದರೂ ಗಾಂಧಿ ಟೊಪ್ಪಿಯನ್ನು ತೊಡುತ್ತಾರೆ. ಗಾಂಧಿ ೩ನೇ ಬಾರಿ ಮಂಗಳೂರಿಗೆ ಬಂದಾಗ ಅವರನ್ನು ನೋಡಲು ಹೊರಟ ಶೂದ್ರ ಜನಾಂಗದ ಶಿಸ್ತು. ಜನರ ಮನಸ್ಸಿನಲ್ಲಾದ ಬದಲಾವಣೆಯನ್ನು ಸೂಕ್ಷ್ಮವಾಗಿ ಕಾದಂಬರಿಯಲ್ಲಿ ಅವಲೋಕಿಸಲಾಗಿದೆ. ಕೊರಗರು, ಮುಂಡೇಲರು, ಶಿಸ್ತು ಸುಭದ್ರತೆಯ ಕಂಡು ಹೆಬ್ಬಾರರಿಗೆ ಆಶ್ಚರ್ಯವಾಗುತ್ತದೆ. ಊರಿಗೆ ಮರ್ಯಾದೆ ಸಾರುದಿಕ್ಕೆ ಇವೆಂದೂ ಇಷ್ಟೊಂದು ಶಿಸ್ತಾಗಿ ಮೈಯ ಕೊಳ ಜಾರಿಸಿ ಹೊಸ ಚಲ್ಲಣ ತೊಟ್ಟು ಹೋದುವೇಅಲ್ಲ. ಇಂಥಾ ಸಂಭ್ರಮವನ್ನು ತಾನೆಂದೂ ಈ ಹೊತ್ತಿಗೆ ಕಂಡಿಲ್ಲ ಎಂಬ ಹೆಬ್ಬಾರರ ಮಾತುಗಳಲ್ಲಿ ಶೂದ್ರಾತಿಶೂದ್ರರಲ್ಲಾದ ಬದಲಾವಣೆಯನ್ನು ಸೂಚಿಸುತ್ತದೆ. ಹೆಬ್ಬಾರರು ಗಾಂಧಿಯನ್ನು ನೋಡಲು ಹೋಗುವುದು ಬೇಡವೆಂಬ ಸಿಟ್ಟಿನಿಂದ ಹೇಳಿರುತ್ತಾರೆ. ಈ ವಿಷಯವನ್ನು ಕೇಳದ ಬೆಸ್ತರು ಗಾಂಧಿಯವರು ಹೇಳಿದಾಗ ಸತ್ಯಾಗ್ರಹ ಮಾಡಿರೋ, ಬೈದರೆ ಕಂಬಳಕ್ಕೆ ಪನಿಕುಳ್ಳುವುದಿಲ್ಲ. ಡೋಲು ಬಾರಿಸುವುದಿಲ್ಲ ಅಂತ ಹೇಳಿ ಎಂದು ಹೇಳಿಕೊಡುತ್ತಾರೆ ಹೆಬ್ಬಾರರಿಗೆ ಇವರ ಅನಿವಾರ್ಯತೆ ಇರುವಷ್ಟೇ ಕೆಳವರ್ಗದವರಿಗು ಹೆಬ್ಬಾರರ ಅನಿವಾರ್ಯತೆ ಇದೆ.

ಏಕೆಂದರೆ ಅವರ ಜಮೀನಿನಲ್ಲಿ ಜೀತದಾಳುಗಳಾಗಿ ದುಡಿಯದೆ ವಿಧಿಯಿಲ್ಲ. ಸ್ವತಂತ್ರ ಅಸ್ತಿತ್ವದ ಬದುಕು ಇವರದಲ್ಲ. ಅದಕ್ಕಾಗಿ ಉಳ್ಳಾಯನೆದುರು ದನಿಯೆತ್ತಿದರೆ ನಾಗರ ಹಾವಿನ ಎದುರು ವಾದಿಸಿದಂತಾಗುವುದು. ಕಾಡಿನ ಪ್ರಾಣಿಗಳಿಗಿರುವಷ್ಟೇ ಬೆಲೆ, ಸ್ಥಾನ ಮಾನ ನಮಗೂ ಎಂದುಕೊಂಡು ಸುಮ್ಮನಾಗುತ್ತಾನೆ.

'ಜೀವನ ಪರ್ಯಂತೆ ಹೀಗೆಯೇ ಜೀತದಾಳುಗಳಾಗಿ ದುಡಿದೇ ಸಾಯುವ ಇವರಿಗೆ ಗಾಂಧಿ ಬಂದರೂ ಒಂದೇ ಫರಂಗಿಯವರೂ ಒಂದೇ, ಯಾವನೇ ಅರಸು ಬಂದರೂ ಏನೋನೂ ಬದಲಾವಣೆ ಇಲ್ಲದ ಜೀವನ ಅವರದ್ದು ಎಂಬ ಕೃತಿಕಾರರು ಹೇಳುತ್ತಾರೆ. ಜಮೀನ್ದಾರ, ಮಾಲೀಕ ಇವರ ಅಡಿಯಳಾಗ ಬದುಕುವ ಒಂದುವರ್ಗಕ್ಕೆ ಎಂಥ ರಾಜಕೀಯ ವಿಪ್ಲವಗಳು ಸಂಭವಿಸಿದರೂ ಅವರ ಜೀವನದಲ್ಲಿ ಯಾವ ಬದಲಾವಣೆಗಳನ್ನು ತರುವುದಿಲ್ಲ. ದುಡಿದು ತಿಂದರೂ ಇನ್ನೊಬ್ಬರ ಹಂಗಿನಲ್ಲಿ ಜೀವಿಸುವುದು ತಪ್ಪುವುದಿಲ್ಲ.

ಎಳೆಯದೆಂದೂ ಹಳೆಯುವುದಕ್ಕೆ ಬಲಿಯುವುದಿಲ್ಲವಂತೆ ಹಾಗೆಯೇ ದ್ರೌಪದಿ ತನ್ನ ತಂದೆಯ ಧೋರಣೆಗಳನ್ನು ಧಿಕ್ಕರಿಸಿದವಳು. ತಿಂಗಳರಾಯರು, ಮಾರಪ್ಪ ಮೊದಲಾದವರ ಸಮ್ಮುಖದಲ್ಲಿ ಆದ್ರಾಮನೊಂದಿಗೆ ವಿವಾಹವಾಗುತ್ತಾಳೆ. ಕತ್ತಿನ ಹಿಡಿ ಆತನೊಳಗಿದೆ. ಆದರ ಹರಿತ ಬಾಯಿ ತನ್ನೊಳಗಿದೆ ಎಂದು ಹೆಬ್ಬಾರರು ಸೂಕ್ಷ್ಮವಾಗಿ ಬಿಡಿಸಿಕೊಳ್ಳಲು ಪ್ರಯತ್ನಿಸುತ್ತಾರೆ. ದ್ರೌಪದಿಯನ್ನು ತಮ್ಮ ಸಂಪ್ರದಾಯದ ಬೀಗ ಮುದ್ರೆಯೊಳಗೆ ಸುರಕ್ಷಿತವಾಗಿಡಲು ಸಾಧ್ಯವಾಗುವುದಿಲ್ಲ. ಅಪ್ಪಯ್ಯನ ಮಾನವೀಯತೆ ಇಲ್ಲದ ತೀಕ್ಷ್ಣ ಕಠೋರ ದೃಷ್ಟಿಯಿಂದ ಬೇಸತ್ತವಳು ದ್ರೌಪದಿ ಮಾನವೀಯತೆ ಇಲ್ಲದ ಧರ್ಮಶಾಸ್ತ್ರವನ್ನೇ ಧಿಕ್ಕರಿಸುವ ಮನಃಸ್ಥಿತಿಯನ್ನು ರೂಢಿಸಿಕೊಳ್ಳುವಂತೆ ಮಾಡುತ್ತದೆ. ಸಾಂಪ್ರದಾಯಿಕ ಬದುಕಿನಲ್ಲಿ ಮಮತೆ, ವಾತ್ಸಲ್ಯವೆಂಬುದು ನಾವು ನಂಬಿಕೊಂಡು ಬಂದಿರುವ ಆಚಾರ, ವಿಚಾರ, ಕಟ್ಟಲೆ, ನೀತಿ ರೀತಿಗಳ ಮಿತಿಯಲ್ಲೇ ಸರಿಯಬೇಕು. ಈ ನಿಯಮಗಳ ಪಾಲನೆಗಾಗಿ ಮಾನವೀಯತೆಯನ್ನು ತಮ್ಮಿಂದ ದೂರ ಸರಿಸುತ್ತಾರೆ. ರುಕುಣಿಯಮ್ಮ ಹೆಬ್ಬಾರರ ಅಳಿಯ ನರಹರಿ ಸತ್ತಾಗ ದ್ರೌಪದಿಯನ್ನು ಗಂಡನ ಮನೆಯಲ್ಲಿ ಬಿಟ್ಟರೆ ಅನಾಹುತ ಸಂಭವಿಸಿತು ಎಂದು ತಮ್ಮ ಭದ್ರ ಬಿಗಿಕಾವಲಿನಲ್ಲಿ ಇಟ್ಟುಕೊಂಡಿದ್ದರು ಅದನ್ನು ಮೀರಿ ಮದುವೆಯಾದ ದ್ರೌಪದಿಗೆ ಘಟಶ್ರದ್ಧಾ ಮಾಡಿ ತಮ್ಮ ಪಾಲಿಗೆ ಸತ್ತಳೆಂದು ಸಮಾಧಾನ ತಂದುಕೊಂಡರು. ದ್ರೌಪದಿ ದೋಪುಬ್ಯಾರ್ದಿ, ರೋಪು, ದೋಪಮ್ಮ ಆಗಿ ತನ್ನ ಅಸ್ತಿತ್ವವನ್ನು ಗುರುತಿಸಿಕೊಂಡಳು.

ಉಪ್ಪಿನ ಸತ್ಯಾಗ್ರಹ, ಮಧ್ಯಪಾನನಿಷೇಧ, ಪರದೇಶಿ ವಸ್ತ್ರ ಬಹಿಷ್ಕಾರ, ಚಳವಳಿಗಳನ್ನು ಭಾಗವಹಿಸಿ ಅದ್ರಾಮ ಮರಣ ಹೊಂದಿದನು. ಆಗಲೂ ಸುರಗಿಮಠ ಕಾರುಣ್ಯದಿಂದ ಪ್ರತಿಕ್ರಿಯಿಸಲಿಲ್ಲ. ಐತು, ಪೊತ್ಸಲ, ತಿಂಗಳಾಯ, ಮಾರಪ್ಪ, ದಾರು ಮೊದಲಾದವರ ಸಾಂತ್ವನಗಳೆ ದ್ರೌಪದಿಯ ಬದುಕಿಗೆ ಸಮಾಧಾನ ತಂದದ್ದು.

ಸ್ತ್ರೀ ಸಹಜ ಬದುಕಿಗಿಂತ ಭಿನ್ನವಾದ ಇಬ್ಬರು ಸ್ತ್ರೀಪಾತ್ರಗಳು ಈ ಕಾಂದಬರಿಯಲ್ಲಿ ಮುಖ್ಯವಾಗುತ್ತದೆ. ವಿಧವೆ ದ್ರೌಪದಿ, ಗರ್ಭಕೋಶ ಇಲ್ಲದ ದಾರು. ದ್ರೌಪದಿ-ದಾರು ಒಂದೇ ದೋಣಿಯಲ್ಲಿ ಪಯಣಿಸುವವರು ಎಂದು ಕೃತಿಕಾರರು ಹೇಳುತ್ತಾರೆ. ಇಬ್ಬರಲ್ಲಿ ಸ್ವಲ್ಪ ಹೆಚ್ಚು ಕಡಿಮೆ ಸಮಸ್ಯೆ ಸವಾಲುಗಳು, ನಿರೀಕ್ಷಿಸಿದ

ಅವಗಡಗಳು ಬದುಕಿನಲ್ಲಿ ಸಂಭವಿಸಿವೆ. ಇದೇ ಅವರಿಬ್ಬರ ನಡುವಿನ ಆತ್ಮೀಯತೆಗೆ ಕಾರಣವಾಗಿರಲೂಬಹುದು. ಈ ಎರಡೂ ಪಾತ್ರಗಳ ನೋವಿಗೂ ಕಾದಂಬರಿಯಲ್ಲಿ ಸಮಾಧಾನದ ಮುಕ್ತಾಯ ಸಿಗುತ್ತದೆ. ಮಟ್ಟಮ್ಮಕ್ಕ ಲೋಕದ ಕಣ್ಣಿಗೆ ಅಸಹ್ಯಳೆನಿಸಿದರೂ ಸಂಪ್ರದಾಯ ನಿಷ್ಠಳಾದರು. ರುಕುಣಿಯಮ್ಮನಿಗೆ ಹೋಲಿಸಿದರೆ ಮಾನವೀಯತೆ, ಅನುಕಂಪ, ವಿಶ್ವಾಸ, ನಂಬಿಕೆಗಳನ್ನು ಹೆಚ್ಚು ಎತ್ತರದವಳಾಗುತ್ತಾಳೆ. ನನ್ನ ಪಾಲಿನ ಕರ್ತವ್ಯವನ್ನು ಸ್ವಲ್ಪವಾದರೂ ವಿವೇಚಿಸಿ ತನ್ನ ಜೀವನದಲ್ಲಿ ಅಳವಡಿಸಿಕೊಳ್ಳುವುದನ್ನು ಕಾಣಬಹುದು. ಪುಟ್ಟಮ್ಮಕ್ಕನ ಗಂಡ ನಾರಾಯಣಭಟ್ಟ ತಾನು ಚೆನ್ನಾಗಿರುವವರೆಗೂ ಬೇರೆ ಊರಿಗೆ ಹೋಗಿ ಮತ್ತೊಬ್ಬಳೊಂದಿಗೆ ಚಿಂತೆ ಇಲ್ಲದೆ ಜೀವಿಸಿದರು. ಕುಷ್ಠರೋಗ ಪೀಡಿತರಾಗಿ ಬಂದದ್ದು ಹೆಂಡತಿ ಪುಟ್ಟಮ್ಮಕ್ಕನ ಬಳಿಗೆ. ಪುಟ್ಟಮ್ಮಕ್ಕ ಏನೊಂದು ಮಾತನಾಡದೆ ಆತನ ಶುಶ್ರೂಷೆಯಲ್ಲಿ ತೊಡಗುತ್ತಾಳೆ. ತನ್ನ ಗಂಡನ ಮನಸ್ಸಿಗೆ ನೋವುಂಟು ಮಾಡಬಾರದೆಂದು ಗಾಂಧಿಯನ್ನು ನೋಡಬೇಕೆನ್ನುವ ತನ್ನ ಹೆಬ್ಬಯಕೆಯನ್ನು ನಿರ್ಲಕ್ಷಿಸುತ್ತಾಳೆ. ಹೆಬ್ಬಾರರಿಗೆ ತಿಳಿಯದಂತೆ ದ್ರೌಪದಿ – ಅದ್ರಾಮರನ್ನು ವಿಚಾರಿಸಿಕೊಂಡು ಬರುತ್ತಾಳೆ. ಅದ್ರಾಮ ಸತ್ತಾಗಲೂ ದ್ರೌಪದಿಗೆ ಸಮಾಧಾನ ಹೇಳಲು ಮುಂದಾಗುತ್ತಾಳೆ.

ರುಕುಣಿಯಮ್ಮ ಪುಟ್ಟಮ್ಮಕ್ಕ ವಯೋಮಾನದಲ್ಲಿ ಸಮಾನರಾದರೂ ಬದುಕಿನ ಸಮಸ್ಯೆಗಳಲಿ ಒಬ್ಬರಿಗಿಂತ ಒಬ್ಬರು ಭಿನ್ನ. ಮಾರಪ್ಪನ ತಾಯಿ ಸೂರಕ್ಕ ಮನೆಯ ಬಗ್ಗೆ ಬೇಜವಾಬ್ದಾರಿ ಹೊಂದಿದ ಮಗನನ್ನೂ ಯಾವಾಗಲೂ ಬಯ್ಯುತ್ತಿರುತ್ತಾಳೆ. ಗಾಂಧಿದೇಶ ಎಂದು ತಿರುಗುವ ಮಗನ ಬಗ್ಗೆ ಆಕೆಗೆ ಅಸಮಧಾನ, ಶಿಖಂಡಿ ಎಂದು ಊರಿನವರೆಲ್ಲ ಆಡಿಕೊಳ್ಳುತ್ತದ್ದರೂ ಮಗ ದಾರುವನ್ನು ಮದುವೆಯಾಗುತ್ತೇನೆಂದಾಗ ತನ್ನ ಮನೆಗೆ ಸೊಸೆಯಾಗಿ ಸ್ವೀಕರಿಸುತ್ತಾಳೆ. ದ್ರೌಪದಿ, ದಾರು ತಾವೆ ಚರಕದಿಂದ ನೂತು ಖಾದಿ ಸೀರೆ ಉಡಲು ಮುಂದಾಗುತ್ತಾರೆ. ಗಾಂಧಿ ನಿಧಿಗೆ ತಮ್ಮೆಲ್ಲಾ ಒಡವೆಗಳನ್ನು ತಾವಾಗಿಯೇ ಅರ್ಪಿಸುತ್ತಾರೆ.

ಸ್ತ್ರೀ ಸಹಜ ಮನಸ್ಸಿನ ತೊಳಲಾಟ, ಆಸೆ, ಕನಸು, ಬಯಕೆಗಳು, ಅವುಗಳ ಈಡೇರಿಕೆ ಮೊದಲಾದವುಗಳೇ ಕಾದಂಬರಿಯಲ್ಲಿ ವಿಶೇಷವಾಗಿ ವರ್ಣಿತವಾಗಿದೆ.

ಈ ಕಾದಂಬರಿಯಲ್ಲಿ ಕಾದಂಬರಿಕಾರರೇ ನೇರವಾಗಿ ಘಟನೆಗಳನ್ನು ನಿರೂಪಿಸುತ್ತಾ ಹೋಗುತ್ತಾರೆ. ಆದ್ದರಿಂದ ಇಲ್ಲಿನ ಕಥನವಿಧಾನವನ್ನು ಪ್ರತ್ಯಕ್ಷ ವಿಧಾನ ಎನ್ನಬಹುದು. ಪಾತ್ರ ಪ್ರಧಾನವಾದ ಕಾದಂಬರಿಯಾದ್ದರಿಂದ ಪಾತ್ರ ಚಿತ್ರಣಕ್ಕೆ ಪ್ರಧಾನ್ಯವಿದ್ದರೂ ವಸ್ತುವಿನೊಂದಿಗೆ ಪಾತ್ರದೊಡನೆ ನಿಕಟ ಸಂಬಂಧವಿದೆ. ಈ ಕೃತಿಯಲ್ಲಿ ಕಥನಕ್ಕಿಂತ ಸಂಭಾಷಣೆಗೆ ಹೆಚ್ಚು ಒತ್ತು ಕೊಟ್ಟಿದೆ. ಇದರಿಂದ ಪಾತ್ರಗಳ ಮೇಲೆ ಬೆಳಕು ಬೀಳುವುದಲ್ಲದೆ ಕಥೆಯೂ ನಿಲ್ಲದೆ ಬೆಳೆಯುತ್ತಾ ಹೋಗಿದೆ. ಸಂಭಾಷಣೆಯು ಕಾದಂಬರಿಗೆ ನಾಟಕೀಯತೆ ಸ್ವಾರಸ್ಯಕರವಾಗಿ ಸನ್ನಿವೇಶಕ್ಕೆ ತಕ್ಕಂತೆ ಬಂದಿದೆ. ಕಡಲ ಕೆರೆಯ ಜೀವನವನ್ನು ಪ್ರಾದೇಶಿಕ ವೈಶಿಷ್ಟ್ಯದೊಡನೆ ಹೃದ್ಯಂಗಮವಾಗಿ ಚಿತ್ರಿಸಿ ವ್ಯಕ್ತಿಗಳ ಅಂತಃ ಪ್ರೇರಣೆಗಳನ್ನು ಭಾವ ವಿಶೇಷಗಳನ್ನು ಹೊರಗೆಡಹಿದ್ದಾರೆ. ಬಾಳಿನ ಸಮಸ್ಯೆಗಳನ್ನು ಕುರಿತು ತನ್ನ ವಿಶಿಷ ದೃಷ್ಟಿ ದರ್ಶನಗಳನ್ನು ಪಾತ್ರಗಳ ಮೂಲಕ ಪ್ರತ್ಯಕ್ಷವಾಗಿ ಕೆಲವೊಮ್ಮೆ ಪರೋಕ್ಷವಾಗಿ ಸೂಚಿಸಿದ್ದಾರೆ.

## ಅಧ್ಯಾಯ – ೫

## ಗಾಂಧಿ ಬಂದ ಕಾದಂಬರಿಯಲ್ಲಿ ಕಂಡು ಬರುವ ಸಾಮಾಜಿಕ ಬದಲಾವಣೆ

ಎಚ್. ನಾಗವೇಣಿಯವರವರ 'ಗಾಂಧಿಬಂದ' ಕಾದಂಬರಿಯು ಇತ್ತೀಚಿನ ದಿನಗಳ ಮಹತ್ವ ಪೂರ್ಣವಾದ, ಸೃಜನಶೀಲ ಕೃತಿಯಾಗಿದೆ. ಸಾಮಾಜಿಕ ಪರಿವರ್ತನೆಯನ್ನು ಇಷ್ಟೊಂದು ಸೂಕ್ಷ್ಮವಾಗಿ, ಆಕರ್ಷಕವಾಗಿ, ಪಕ್ಷಪಾತದ ಸುಳಿವೂ ಇಲ್ಲದೆ ಬರೆಯುವುದು ಕಷ್ಟ. ಎಲ್ಲಾ ಪಾತ್ರಗಳು ಜೀವಂತವಾಗುವ, ಆದರೆ ಯಾವೊಂದು ಪಾತ್ರವೂ ಮುಖ್ಯವಾಗದ ಸಮುದಾಯ ಕಾದಂಬರಿಯಾಗಿದೆ. ಜಿಲ್ಲೆಗೆ ಗಾಂಧೀಜಿಯವರ ಭೇಟಿ ಜನಜೀವನದಲ್ಲಿ ತಂದ ಕ್ರಾಂತಿಕಾರಕ ಬದಲಾವಣೆಗಳನ್ನು ಲೇಖಕಿ ಅತ್ಯಂತ ಮನೋಜ್ಞವಾಗಿ ಚಿತ್ರಿಸಿದ್ದಾರೆ. ಇಲ್ಲಿ ಕೊರಗರ ಐತುವಿನಿಂದ ಹಿಡಿದು ಸ್ವಾತಂತ್ರ್ಯಹೋರಾಟಗಾರ ಕಾರ್ನಾಡರವರೆಗಿನ ಎಲ್ಲಾ ಪಾತ್ರಗಳು ಸಹ ಸುತ್ತ್ಯಾರ್ಹ. ಕರಾವಳಿಯ ಪ್ರಕೃತಿ, ತುಳುನಾಡಿನ ಸಾಂಸ್ಕೃತಿಕ ಮಜಲುಗಳು, ವರ್ಗ, ವರ್ಣ, ಲಿಂಗಭೇದಗಳ ನಡುವಿನ ತಾರತಮ್ಯ ಇವೆಲ್ಲವುಗಳನ್ನು ಸ್ವಾತಂತ್ರ್ಯ ಪೂರ್ವಕ್ಕೆ ಕೊಂಡ್ಯೊಯ್ದು ಇತಿಹಾಸಕ್ಕೆ ಸಮೀಕರಿಸಿ ಲೇಖಕಿ ತನ್ನ ಕಾದಂಬರಿಯನ್ನು ಕಟ್ಟಿಕೊಟ್ಟಿದ್ದಾರೆ.

"ಗಾಂಧಿ" ಎಂಬ ಮಂತ್ರವಾದಿ ಕರಾವಳಿಗೆ ಭೇಟಿ ನೀಡುವುದರ ಪರಿಣಾಮ ಹಾಗೂ ಅವರ ತತ್ವ ಚಿಂತನೆಗಳ ಪ್ರಭಾವದಿಂದ ಜಿಲ್ಲೆಯ ಜನರ ಸಾಂಸ್ಕೃತಿಕ, ಸಾಮಾಜಿಕ ಜನಜೀವನದಲ್ಲಿ ಬದಲಾವಣೆ ತಕ್ಷಣಕ್ಕೆ ಆಗದಿದ್ದರೂ ಸಹ ಕಾಲ ಸರಿದಂತೆ ಸಂಕ್ರಮಣಕ್ಕೆ ಒಳಪಡುತ್ತಾ ಬದಲಾವಣೆಯ ಗಾಳಿ ಬೀಸಿತು. ಈ ಕೃತಿ ಅದನ್ನು ಒಟ್ಟಾರೆಯಾಗಿ ಅಥವಾ ಹಿಡಿಯಾಗಿ ಕಟ್ಟಿಕೊಡದಿದ್ದರೂ ಅದರ ಪ್ರಭಾವ ಕಾದಂಬರಿಯುದ್ದಕ್ಕೂ ದಟ್ಟವಾಗಿ ಗೋಚರಿಸುತ್ತದೆ. ಸಾಂಸ್ಕೃತಿಕ ವಿಷಯಗಳಿಗೆ ಮಹತ್ವ ನೀಡಿರುವುದರಿಂದ ಅಸ್ಪೃಶ್ಯತೆ, ಜಾತಿ, ಧರ್ಮಗಳ ವಿಚಾರ ಇಲ್ಲಿ ಕಂಡುಬರುತ್ತದೆ. ಖಾದಿ ಪ್ರಚಾರ ಮಧ್ಯಪಾನನಿಷೇಧ ಚಳುವಳಿ, ಉಪ್ಪಿನ ಸತ್ಯಾಗ್ರಹ, ಪರದೇಶಿ ವಸ್ತ್ರ ಬಹಿಷ್ಕಾರ ಚಳುವಳಿ ಮುಂತಾದ ಗಾಂಧಿ ಚಿಂತನೆಗಳ ಪ್ರಭಾವ ಪ್ರೇರಣೆಗಳಿಂದ ಕಾದಂಬರಿಯ ಸಾಮಾಜಿಕ ಜನಜೀವನದ ಕ್ರಾಂತಿಕಾರಕ ಬದಲಾವಣೆಗೆ ಸಹಕಾರಿಯಾಗಿದೆ.

ಈ ಕಾದಂಬರಿಯಲ್ಲಿ "ಗಾಂಧಿ"ಯ ಹೆಸರೊಂದು ಇಷ್ಟೆಲ್ಲಾ ಬದಲಾವಣೆ ತರುತ್ತಿದ್ದರೂ ಸಹ ಬ್ರಾಹ್ಮಣವರ್ಗ ಅವರನ್ನು ವಿರೋಧಿಸುತ್ತಿದ್ದರೂ ಗಾಂಧಿನಿಧಿಗೆ ತಮ್ಮ ಕೈಲಾದ ಹಣ, ಒಡವೆಗಳನ್ನು ಮಾತ್ರ ಯಾವುದೇ ವಿರೋಧವಿಲ್ಲದೆ ನೀಡುವುದು ಗಾಂಧಿಯ ಖ್ಯಾತಿ, ಅವರ ತತ್ವಗಳು, ಜನರ ಮೇಲೆ ಬೀರಿರುವ ಪ್ರಭಾವ ಹಾಗೂ ಬ್ರಿಟಿಷರನ್ನು ಹೊಡೆದೋಡಿಸುವ ಅವರ ಈ ಶ್ರಮ ಎಲ್ಲಾ ವರ್ಗದವನ್ನು ಸಹ ಮಂತ್ರ ಮುಗ್ಧರನ್ನಾಗಿಸುತ್ತದೆ. ಹೆಬ್ಬಾರರಿಂದ ಹಿಡಿದು ಶೂದ್ರರವರೆಗೆ ತಮ್ಮ ಕಾಣಿಕೆ ನೀಡಿದರೆ, ಹೆಬ್ಬಾರರಿಂದ ಹಿಡಿದು ಕೊರಗರ ಐತುವಿನ ವರೆಗೂ ಗಾಂಧಿಯನ್ನು ನೋಡಲು ತವಕಿಸಿ ಅವರನ್ನು ಕಾಣುವರು. ಇಂತಹ ಕೆಲವು ಸಂಘರ್ಷಗಳಿದ್ದರೂ ಸಹ ಜುಮಾದಿಯ ದೈವ ಮಾತ್ರ ಅದ್ರಾಮನಿಗೂ ಸ್ವತಃ ಕರೆದು ಪ್ರಸಾದ ನೀಡುವುದಲ್ಲದೆ ವಿಧವೆ ದ್ರೌಪದಿಗೂ ಸಹ ಹರಿಸಿ ದೈವಕ್ಕೆ ಜಾತಿಭೇದವಿಲ್ಲವೆಂಬುದನ್ನು ಸಾಬೀತುಪಡಿಸುತ್ತಾ ಅದೆಲ್ಲ ಮನುಷ್ಯನ ನೀಚ ಪ್ರವೃತಿಗೆ ಹಿಡಿದ ಕನ್ನಡಿ ಎಂಬುದನ್ನು ಸಾರುತ್ತದೆ.

ಇದರಿಂದ ಗಾಂಧಿಬಂದ ಕಾದಂಬರಿಯಲ್ಲಿ ಸಾಮಾಜಿಕ ಬದಲಾವಣೆಗೆ ಸಹಕಾರಿಯಾದ ಗಾಂಧಿ ಹಾಗೂ ಅವರ ತತ್ವಗಳು, ತುಳುನಾಡಿನ ಸಾಂಸ್ಕೃತಿಕ ಆಚರಣೆಗಳು, ದೇಶಭಕ್ತ, ಅದ್ರಾಮ, ಮಾರಪ್ಪ, ತಿಂಗಳಾಯರು, ಕರ್ನಾಡರು ಹಾಗೂ ಖಾದಿಪ್ರಚಾರ, ಮದ್ಯಪಾನ ನಿಷೇಧ ಚಳುವಳಿ. ಉಪ್ಪಿನ ಸತ್ಯಾಗ್ರಹ ಚಳುವಳಿ, ಪರದೇಶಿ ವಸ್ತ್ರ ಬಹಿಷ್ಕಾರ ಚಳುವಳಿ ಹೇಗೆ ಕ್ರಿಯೆಗೆ ತಮ್ಮ ಮಹತ್ವಪೂರ್ಣ ಕೊಡುಗೆ ನೀಡಿದವೆಂಬುದನ್ನು ಮುಂದಿನಂತೆ ತಿಳಿಯಬಹುದು.

ಗಾಂಧಿಬಂದ ಕಾದಂಬರಿಯು ಸಾಂಸ್ಕೃತಿಕ ವಿಷಯಗಳಿಗೆ ಮಹತ್ವ ನೀಡಿರುವುದರಿಂದ ಅಸ್ಪೃಶ್ಯತೆ, ಜಾತಿ, ಧರ್ಮಗಳ ವಿಚಾರ ಹೆಚ್ಚು ಚರ್ಚೆಗೆ ಒಳಗಾಗಿದ್ದು ವರ್ಗ ಸಂಘರ್ಷದ ವಿವರವಿದೆ. ಸಹಪಂಕ್ತಿಭೋಜನ, ಹಿಂದೂ-ಮುಸ್ಲಿಂ ವಿವಾಹ, ಮನುಷ್ಯ ಜಾತಿಯ ತಾರತಮ್ಯಗಳನ್ನು ನಿವಾರಿಸಿಕೊಂಡಿರುವುದರಿಂದ ದೇವರಲ್ಲಿ ಎಲ್ಲರೂ ಸಮಾನರು ಎಂದು ಕಾದಂಬರಿ ಒತ್ತಿಹೇಳುತ್ತದೆ.

ಕಂಬಳದಲ್ಲಿ ಮೊದಲು ಬ್ರಾಹ್ಮಣ ಊಟ ಮಾಡಿ ತೇಗಿದನೆಂದರೆ ಸ್ವತಃ ನಾರಾಯಣ ದೇವರು ಊಟ ಮಾಡಿ ಸಂತೃಪ್ತಿಗೊಂಡಷ್ಟು ಸಮಾಧಾನ, ಶೂದ್ರರಾದರೆ ಅಡುಗೆಯ ಕಿಟಕಿಗೆ ಮೂಗಿನ ಹೊಳ್ಳೆಯಿಟ್ಟೆ ಮಲಗಿರುತ್ತವೆ ಎಂಬ ಬೈಗುಳ. ಮನೆಗೆ ಬಂದ ನೆಂಟರು ಉಂಡು, ತೇಗಿ, ಉಳಿದ ಸಾರು, ಪರಮಾನ್ನಗಳಿಗೆ ಅವುಗಳ ಸಾಮರ್ಥ್ಯಕ್ಕೆ ತಕ್ಕಂತೆ ನೀರು ಸೇರಿಸಿ ಉದ್ದ ಮಾಡಿ ಒಂದಷ್ಟು ಉಪ್ಪು-ಹುಳಿ-ಕಾರ-ಬೆಲ್ಲ ಎಸೆದು ಒಂದು ಕುದಿ ಬರಿಸಿ ಬಡಿಸಿದರೆ ಸಾಕು. ಅದನ್ನೆ ಅವು ಎಲೆ ಹರಿಯಷ್ಟು ನೆಕ್ಕಿ ನೆಕ್ಕಿ ಉಂಡು ಎದ್ದು ಹೆಬ್ಬಾರರಿಗೊಂದು ಸಾಷ್ಟಾಂಗ ಅಡ್ಡ ಬಿದ್ದು ಎದ್ದು ಹೋಗುತ್ತವೆ. ಮತ್ತು ಕೊರಗರು ಕಂಬಳದಲ್ಲಿ ಕೋಣಗಳಾಗಿ ಓಡಿ ಕೆಟ್ಟ ಶಕ್ತಿಗಳನ್ನು ತಮ್ಮೊಳಗೆ ಅವಾಹಿಸಿಕೊಳ್ಳುವುದು ಕಂಬಳದ ಪ್ರಮುಖ ಸಂಪ್ರದಾಯ ಕೊರಗರೆಂಬ ಕಾರಣಕ್ಕೆ ಕಂಬಳದ ಕೋಣಕ್ಕಿಂತ ಕಡೆ ಎಂಬ ಅಭಿಪ್ರಾಯ ಚಾಲ್ತಿಯಲ್ಲಿರುವುದನ್ನು ಗಮನಿಸಬಹುದು. ಅಲ್ಲದೆ ಕೊರತಿಯರು ಜಾತ್ರೆಯಲ್ಲಿ ಆಕಸ್ಮಿಕವಾಗಿ ಮೇಲ್ವರ್ಗದವರನ್ನು ಮುಟ್ಟಿಬಿಟ್ಟರೆ ಎಂದು ಹೆದರಿಯೇ ಜಾತ್ರೆಗೆ ಹೋಗಲಿಲ್ಲ. ದ್ರೌಪದಿ ಚಿಕ್ಕಂದಿನಲ್ಲಿ ಮಾರಪ್ಪನನ್ನು ಮಾವ ಎಂದು ಕರೆದರೆ ಸಸಂಪ್ರದಾಯವಾದಿ ರುಕುಣಿಯಮ್ಮ ಬೈಯುತ್ತಿದ್ದರು. ಶೂದ್ರರನ್ನು ಹೆಸರಿಡಿದೇ ಕರೆಯಬೇಕೆಂದು ನಿಯಮವೆಂದು ತಿಳಿ ಹೇಳುತ್ತಿದ್ದಳು. ಕೃತಿಕಾರರು ಮೂಡೆ ತಿಂಡಿಯ ವಿವರವನ್ನು ನೀಡುತ್ತಾ ವ್ಯಾಪಿಸಿರುವ ಅಸ್ಪೃಶ್ಯ ಮನಸ್ಸುಗಳನ್ನು ಪರಿಚಯಿಸುತ್ತಾರೆ. ಮೂಡೆ ತಿಂಡಿಗೆ ಬೇಕಾಗುವ ಎಲೆ ತರಲು, ಸ್ವಚ್ಛಗೊಳಿಸಲು ಶೂದ್ರರು ಬೇಕು. ಅದನ್ನು ದೇವರ ಕೆರೆಗೆ ಹಾಕಿ ಪವಿತ್ರಗೊಳಿಸಿ ಅಡುಗೆ ಮಾಡಿಕೊಂಡು ಸವಿಯಬಲ್ಲವರು ಮಾತ್ರ ಬ್ರಾಹ್ಮಣರು. 'ಹೊಟ್ಟೆ ಉರಿದರೆ ಅಂತಪ್ಪ, ಕುಂಡೆ ಕಡಿದರೆ ಕೂಸಪ್ಪ' ಎಂದು ಅವಲಂಬಿಸಿರುವ ಮೇಲ್ವರ್ಗದವರು ಅವರನ್ನು ಶೋಷಿಸುವ ಪರಿ ಊಹಿಸಲು ಅಸಾಧ್ಯ ಅವರು ಮರು ಮಾತನಾಡಿದರೆ ಅಕ್ಕಿ ಮುಡಿಯನ್ನೇ ಕೊಡುವುದಿಲ್ಲ ಎನ್ನುತ್ತಾರೆ ಎನ್ನುವ ಭಯ ಅವರಿಗೆ ಅಸಹನೆ, ಸಿಟ್ಟು ಎಷ್ಟೇ ಇದ್ದರೂ ಹೊಟ್ಟೆಗಾಗಿ ಸಹಿಸುವುದನ್ನು ಕಲಿತಿದ್ದಾರೆ. ನಮ್ಮೂರಿನ ಬಡ ಶೂದ್ರರನ್ನು ಶೋಷಿಸುವ ಪರಿ ನೋಡಿದರೆ ಪರಂಗಿಯವರು ನಾಚಿಕೆಯಿಂದ ಸಾಯಬೇಕಷ್ಟೇ ದೇವರು ಕೊಟ್ಟ ಜಾತಿಯೇ ತಮಗೆ ದುರ್ಬಲರನ್ನು ತುಳಿಯಲು ಅವಕಾಶ ಮಾಡಿಕೊಟ್ಟಿದೆ ಎನ್ನುವ ಧೋರಣೆಯಿಂದ ಅವರು ಶೂದ್ರರನ್ನು

ನಡೆಸಿಕೊಳ್ಳುತ್ತಾರೆ. ಅಂತಪ್ಪ ಹೆಬ್ಬಾರರ ಮನೆಯ ಕೆಲಸದಾಳು ಈತ ಹೆಬ್ಬಾರರಿಂದ ಕೆಲಸ ಮಾಡಲು ಇಲ್ಲದ ನೆಬ ಹೂಡಿ ತಪ್ಪಿಸಿಕೊಳ್ಳುತ್ತಾನೆ. ಹೆಬ್ಬಾರರು ಶೂದ್ರರು ಎದುರು ಬದುರಾದಾಗ ಶೂದ್ರರೆ ನೀವು ಅತ್ತ ಸರಿಯಿರಿ ಎಂದಾಗ ಹೆಬ್ಬಾರರು ಅವರ ಮೇಲೆ ಹರಿಹಾಯುತ್ತಾರೆ. ಶೂದ್ರ ಪಡೆಯೆ ಕೆಳಗಿಳಿದು ದಾರಿ ಬಿಡುತ್ತದೆ.

ದೇವಸ್ಥಾನದಲ್ಲಿ ಬ್ರಾಹ್ಮಣರ ವಿರೋಧದ ನಡುವೆಯೂ ಒಳನುಗ್ಗಲು ಹಾಗೂ ಸಹಪಂಕ್ತಿ ಭೋಜನಕ್ಕೆ ಕಾರಣರಾದ ಗಾಂಧಿಯನ್ನು ದೇವರೆಂದು ನಂಬಿ ಕೊರಗರ ಐತು ಅವರನ್ನು ಕಾಣಲು ಊರಿನ ಎಲ್ಲರ ಕಾಲಿಗೆ ಬೀಳುವ ಸನ್ನಿವೇಶ ಕೆಳವರ್ಗದ ಜನರಿಗೆ ಗಾಂಧಿ ಹಾಗೂ ಅವರ ತತ್ವ ಎಂತಹ ಪ್ರಭಾವ ಬೀರುತ್ತಿತ್ತು ಎಂಬುದಕ್ಕೆ ಸಾಕ್ಷಿಯಾಯಿತು. ಅಲ್ಲದೆ ಐತುವನ್ನು ಕುರಿತು ತಿಂಗಳಾಯರು ಆಮೆಯನ್ನು ಕೊಲ್ಲಬೇಡಿ, ಮೊಟ್ಟೆಯನ್ನು ತಿನ್ನಬೇಡಿ ಎಂದಾಗ ಐತು ಒಪ್ಪದಿದ್ದಾಗ ಗಾಂಧಿ ಬರಲಿ ಹೇಳುವೆ ಎಂದು ಹೇಳಿ ಗಾಂಧಿಯ ಅಹಿಂಸಾ ತತ್ವವನ್ನು ಹೇಳಿ ತನ್ನ ಅಳಿಯಂದಿರ ವಿರೋಧದ ನಡುವೆ ಐತು ಆಮೆ ಬಿಟ್ಟು ಇದೊಂದು ಬಾರಿ ಮೊಟ್ಟೆ ಪಡೆದು ಇನ್ನೆಂದೂ ಆಮೆ ಹಾಗೂ ಅದರ ಮೊಟ್ಟೆಯನ್ನು ತಿನ್ನದಿರಲು ಒಪ್ಪುವನು.

ಆದರೆ ಮಾರಪ್ಪ ತೊಡಿಸಿದ ಖಾದಿ ಟೋಪಿಗಳಿಂದ ನೈತಿಕ ಬಲ ಹೆಚ್ಚಿಸಿಕೊಂಡ ಹೆಬ್ಬಾರರ ಕೆಲಸದಾಳುಗಳು ಟೋಪಿ ಧರಿಸಿಯೇ ಕೆಲಸ ಮಾಡುವುದನ್ನು ಕಂಡು ಆ ಟೋಪಿಯನ್ನು ಸುಟ್ಟು ಹಾಕಿದರೂ ಸಹ ಪುನಃ ಮತ್ತೊಂದನ್ನು ಧರಿಸಿ ಕೆಲಸ ನಿರ್ವಹಿಸುವರು. ಇವೆಲ್ಲಾ ಸಾಮಾಜಿಕ ಬದಲಾವಣೆಗಳ ಗಾಂಧಿತತ್ವದ ಹಿನ್ನೆಲೆಯಲ್ಲಿ ಆದ ಬದಲಾವಣೆಗಳಾಗಿ ಕಂಡು ಬರುತ್ತದೆ. ಹೀಗೆ ಮೇಲ್ವರ್ಗದವರು ಶೂದ್ರರನ್ನು ಶೋಷಿಸುವ ಪರಿ ಮತ್ತು ಬದಲಾವಣೆಯ ಗತಿ ಎರಡನ್ನೂ ಈ ಕಾದಂಬರಿಯಲ್ಲಿ ಕಾಣಬಹುದು.

ಅದ್ರಾಮ ಮತ್ತು ದ್ರೌಪದಿಯ ವಿವಾಹ ಎರಡು ಕಾರಣಕ್ಕೆ ಮುಖ್ಯವಾಗುತ್ತದೆ. ಒಂದು ಜಾತಿ ಮತ್ತೊಂದು ವಿಧವೆ. ಅದ್ರಾಮ ಮುಸ್ಲಿಂ ದ್ರೌಪದಿ ಬ್ರಾಹ್ಮಣಳು. ಜೊತೆಗೆ ವಿಧವೆ, ಅದ್ರಾಮ ದ್ರೌಪದಿಯನ್ನು ಚಿಕ್ಕಂದಿನಿಂದ ಬಲ್ಲವನಾಗಿರುತ್ತಾನೆ. ದ್ರೌಪದಿಯು ನರಹರಿಯನ್ನು ಮದುವೆಯಾಗಿ ಆತನ ಆಕಾಲಿಕ ಮರಣದ ತರುವಾಯ ಸನಾತನ ಧರ್ಮದ ರೀತಿ–ರಿವಾಜಿನನ್ವಯ ಗಂಡ ಸತ್ತ ಮುಂಡೆ ಯಾವುದೇ ರೀತಿಯ ಶುಭಕಾರ್ಯಗಳಲ್ಲೂ ಪಾಲ್ಗೊಳ್ಳದೆ ತಲೆಬೋಳಿಸಿಕೊಂಡು, ಜಪಮಾಡುತ್ತಾ ಕೋಣೆಯಲ್ಲಿರಬೇಕು. ಇದನ್ನು ಕಂಡ ಅದ್ರಾಮನು ಗಾಂಧಿಯವರ ವಿಧವಾ ಪುನರ್ ವಿವಾಹದ ಕನಸನ್ನು ಮಾಡುವ ಹುಮ್ಮಸ್ಸಿನಲ್ಲಿ ಹೆಬ್ಬಾರರ ಬಳಿ ಈ ವಿಷಯ ಪ್ರಸ್ತಾಪಿಸಿ ಅವರ ಅವಗಣನೆಗೆ ತುತ್ತಾದನು. ಆದರೆ ಮನೆಯವರ ಹೊಡೆತ, ಹಿಂಸೆಗಳಿಂದ ನೊಂದಿದ್ದ ದ್ರೌಪದಿಗೆ ಅದ್ರಾಮನ ಪ್ರೀತಿ ತುಂಬಿದ ಮಾತು, ಕರುಣೆ, ವಾತ್ಸಲ್ಯ, ಇಷ್ಟವಾಗಿ ಅನುರಕ್ತಳಾದಳು. ಅದ್ರಾಮನು ಸಹ ದ್ರೌಪದಿಯನ್ನು ಪ್ರೀತಿಸತೊಡಗಿದನು. ಮುಂದೆ ಹೆಬ್ಬಾರರ ಇವರಿಬ್ಬರನ್ನು ಬೇರೆ ಮಾಡಲು ಹಲವು ಉಪಾಯಗಳನ್ನು ಹೂಡುವರು. ಆದರೆ ಅವೆಲ್ಲವೂ ವಿಫಲವಾಗುವುದು. ಹೆಣ್ಣಿನ ಆಸೆ, ಆಕಾಂಕ್ಷೆ, ನೋವು ನಲಿವನ್ನು ಗಂಡಾದ ಹೆಬ್ಬಾರರು

ತಿಳಿಯದಿರುವುದು ದೊಡ್ಡ ವಿಷಯವಾಗದಿದ್ದರೂ ಸಹ ಸ್ವತಃ ತಾಯಿಯೇ ಆದ ರುಕುಣಿಯಮ್ಮ ಕಟ್ಟಾ ಸಂಪ್ರದಾಯವಾದಿಯಾಗಿ ತನ್ನ ಮಗಳಿಗಿಂತ ತನ್ನ ಸನಾತನ ಧರ್ಮದ ರೀತಿಗಳು ಹಾಗೂ ಸುರಗೀ ಮಠದ ಮಾನವೆ ಹೆಚ್ಚೆಂದು ತಿಳಿದು ತನ್ನ ಮಗಳಿಗೆ ಹೊಡೆದು ಹಿಂಸೆ ಮಾಡಿ ಕೋಣೆಗೆ ಕೂಡಿ ಕೀಲ ಹಾಕುವಳು. ಆದರೆ ಮನುಷ್ಯನ ಈ ನೀಚತನ ದೇವರ ಮುಂದೆ ಸಲ್ಲುವುದಿಲ್ಲ. ಅದಕ್ಕೆ ಜಾತಿಭೇದವಿಲ್ಲ. ಆದ್ದರಿಂದಲೇ ಅದ್ರಾಮನನ್ನು ಕರೆದು ಹೂ-ಗಂಧ ಪ್ರಸಾದವನ್ನು ನೀಡುತ್ತದೆ. :ದೈವಕ್ಕೆ ಜಾತಿಭೇದವಿಲ್ಲ : ಅದೆಲ್ಲ ಇರುವುದು ರಾಕ್ಷಸಜಾತಿಯ ಮನುಷ್ಯರಿಗೆ ಮಾತ್ರವೆ" ಎಂದು ಪೂಜಾರಿ ಕೊರಗಮೂಲ್ಯ ಮಡಿವಾಳ ಸಿದ್ದುವಿನಲ್ಲಿ ಹೇಳಿಕೊಳ್ಳುತ್ತಾನೆ. ಅಲ್ಲದೆ ವಿಧವೆ ದ್ರೌಪದಿಯನ್ನು ಸಹ ಕರೆದು ಹರಸಿ ಆಕೆಗೂ ಹೂ ಗಂಧ ಪ್ರಸಾದವನ್ನು ನೀಡುತ್ತದೆ.

ನಂತರ ಗುತ್ತಿನೊಡೆಯರ ಸಹಾಯದಿಂದ ಅದ್ರಾಮನೊಂದಿಗೆ ದ್ರೌಪದಿ ವಿವಾಹವಾದಾಗ ಊರಿನ ಬ್ರಾಹ್ಮಣರೆಲ್ಲ ಸೇರಿಕೊಂಡು ದ್ರೌಪದಿ ಸತ್ತಳೆಂದು ನಿರ್ಧರಿಸಿ ಶಾಸ್ತ್ರ ಮಾಡುತ್ತಾರೆ. ಕೇಶವ ಶಾನುಭೋಗರ ಗಂಡು ಮಕ್ಕಳು ತನ್ನ ತಂದೆಯ ಉಪದೇಶವನ್ನು ಧಿಕ್ಕರಿಸಿ ಉಡುಪಿಯ ಮಠಾಧೀಶರ ಮಾರ್ಗದರ್ಶನದಲ್ಲಿ "ಘಟಶ್ರಾದ್ಧ" ನಡೆಸಿದರು. ನಂತರ ಬ್ರಾಹ್ಮಣರೆಲ್ಲ ಸೇರಿಕೊಂಡು ಅರ್ಥವಿಲ್ಲದ ಚರ್ಚೆ ನಡೆಸುವರು. ಅವಳು ಬ್ರಾಹ್ಮಣ್ಯ ಬಿಟ್ಟರು ಸಹ ಬ್ರಾಹ್ಮಣರು ಅವಳನ್ನು ಬಿಡುವುದಿಲ್ಲ ಎಂದು ಹೇಳುವರು. ಆದರೆ ಬ್ರಾಹ್ಮಣರಾದ ಸೀನಪ್ಪಯ್ಯ ಹೆಬ್ಬಾರರೇ ಸ್ವತಃ ನಾರಾಯಣಭಟ್ಟರ ಪತ್ನಿ ಪುಟ್ಟಮ್ಮಕ್ಕನಿಗೆ 'ಸಮಾನ ಕುಲಸ್ಥರ ಮಿಲನಕ್ಕೆ ಜನಿವಾರದ ಅಡ್ಡಿಯಿಲ್ಲ. ಬ್ರಾಹ್ಮಣಕ್ಕೆ ದೋಷವಿಲ್ಲ. ಸನಾತನ ಧರ್ಮದಲ್ಲಿ ಇಂತದಕ್ಕೆಲ್ಲ ಅವಕಾಶ ಇದೆ ಎಂದ ಕಿವಿಯಲ್ಲಿ ಉಸುರುತ್ತಲೇ ಆಕೆಗೆ ನಾಕು ಬಾರಿ ಹೊಟ್ಟೆ ಬರಿಸಿದ್ದಾರೆ. ಹೆಬ್ಬಾರರ ಈ ವಿಷಯ ತಿಳಿದ ಪತ್ನಿ ರುಕುಣಿಯನ್ನು ಇದರ ಬಗ್ಗೆ ಏನೂ ಕೇಳದೆ ಇರುವುದು ವಿಚಿತ್ರ ಎನಿಸುತ್ತದೆ.

ಮಗಳ ಅಂತರ್ಜಾತಿ ವಿವಾಹ ಒಪ್ಪದ ಬ್ರಾಹ್ಮಣ ಸಮುದಾಯ ಅಥವಾ ಸೀನಪ್ಪಯ್ಯ ಹೆಬ್ಬಾರರು ಬೋರೊಬ್ಬರ ಪತ್ನಿ ಅಥವಾ ನಂಬಿಕೆ ಇಟ್ಟು ಪತ್ನಿ ಕಾಯಲು ಹೇಳಿದ ಗೆಳೆಯನ ಪತ್ನಿಯನ್ನೇ ಇಟ್ಟುಕೊಂಡಿರುವ ಅವರ ನಡವಳಿಕೆ ನೈತಿಕತೆಯನ್ನು ಅವರ ಧರ್ಮ ಒಪ್ಪುತ್ತದೆಯೇ ಎಂಬ ಪ್ರಶ್ನೆ ಮೂಡುತ್ತದೆ. ಈ ವಿಚಾರ ತಿಳಿದ ಹೆಬ್ಬಾರರ ಪತ್ನಿ ರುಕುಣಿಯಮ್ಮ ಹೆಬ್ಬಾರರಲ್ಲಿ ಪ್ರಶ್ನಿಸದೆ ಗೊತ್ತಿದ್ದು ಗೊತ್ತಿರದಂತೆ ಇರುವುದು ಪರೋಕ್ಷ ಬೆಂಬಲ ಕೊಟ್ಟಂತಿದೆ ಅಥವಾ ಪುರುಷ ಸಮಾಜದಲ್ಲಿ ಗಂಡನ್ನು ಪ್ರಶ್ನಿಸುವ ಹಕ್ಕಿಲ್ಲವೆಂಬುದನ್ನು ತಿಳಿಸುತ್ತದೆ. ಹಾಗೂ ಕೊನೆವರೆಗೂ ರುಕುಣಿಯಮ್ಮ ಹೆಬ್ಬಾರರ ಬಳಿ ಈ ವಿಚಾರ ಪ್ರಸ್ತಾಪಿಸದಿರುವುದು ಆಕೆಯ ದೌರ್ಭಾಗ್ಯವೇ ಸರಿ. ಆದರೆ ಸ್ವಾತಂತ್ರ್ಯ ಸಿಗದಿರುವ ಅಂತಹ ಸಮಯದಲ್ಲಿ ಸ್ತ್ರೀಯ ಹಕ್ಕುಗಳಿಗೆ ಯಾವುದೇ ಮಾನ್ಯತೆ ಇಲ್ಲದಿರುವುದರಿಂದ ರುಕುಣಿಯಮ್ಮ ಗಂಡನ ಅನೈತಿಕತೆಯನ್ನು ಪ್ರಶ್ನಿಸುತ್ತಿರಲಿಲ್ಲ. ಬದಲಾಗಿ ಆಕೆ ತನ್ನ ಪತಿಯ ಜೊತೆ ಗಾಂಧಿ ನೋಡಲು ತೆರಳಿದಾಗ ಪುಟ್ಟಮ್ಮಕ್ಕನ ಬರುವಿಕೆಯನ್ನು ತಿರಸ್ಕಾರ ಭಾವದಿಂದ ನೋಡಿ ಅವಳ ಬರುವಿಕೆಯನ್ನು ತಡೆದಿದ್ದರೆ ಮುದ್ರಾಧಾರಣೆ ಸಂದರ್ಭದಲ್ಲಿ ನೇರವಾಗಿಯೆ ತಮ್ಮ ಅಸಮಾಧಾನ ವ್ಯಕ್ತಪಡಿಸುತ್ತಾರೆ. ಹೀಗೆ ರುಕುಣಿಯಮ್ಮ ಕೇವಲ ಅಸಮಾಧಾನದ ಮೂಲಕ ತಮ್ಮ ಕೋಪವನ್ನು ಹೊರಹಾಕುತ್ತಿದ್ದರು. ಗಂಡ ಇದ್ದರೂ ಅವರ

ಪೂರ್ತಿ ಪ್ರೀತಿ ಸಿಗದ ರುಕುಣಿಯಮ್ಮ ಒಂದೆಡೆ, ಗಂಡನೇ ಇಲ್ಲದೆ ವ್ಯಥೆ ಪಡುವ ಮಗಳು ದ್ರೌಪದಿ ಮತ್ತೊಂದೆಡೆ ಹೀಗೆ ಒಂದೆ ಮನೆಯಲ್ಲಿದ್ದರೂ ಸಹ ರುಕುಣಿಯಮ್ಮ ಮಗಳ ಮೇಲೆ ದೌರ್ಜನ್ಯ ನಡೆಸಿ ನಿರ್ಬಂಧ ಹೇರುವುದು ಕೇವಲ ಸನಾತನ ಧರ್ಮದ ನಿಯಮಗಳಿಗೆ ಹೆದರಿ ಮಾತ್ರ.

ಮತ್ತೊಂದೆಡೆ ಅದ್ರಾಮ ದ್ರೌಪದಿಯನ್ನು ಮದುವೆಯಾದ ವಿಷಯ ತಿಳಿದು ಆತನ ತಂದೆ ಬಂದು ಬೈಯ್ಯುತ್ತಾರೆ. ಆದರೆ ತಂದೆ ಹಾಗೂ ಜಮಾತಿನವರ ಮಾತಿಗೆ ಬೆಲೆ ಕೊಡದೆ ತಿರಸ್ಕಾರದಿಂದ ಸನ್ನೆಯಲ್ಲಿಯ ಹೊರಡಿ ಎಂದಾಗ ಮುಕ್ತಿಯೊಬ್ಬರು "ನಾಳೆ ಸಾಯುವ ಕಾಲಕ್ಕೆ ಶವಪೆಟ್ಟಿಗೆ, ದಫನಕ್ಕಾದರೂ ಜಮಾತು ಧರ್ಮವೆಂಬುದು ಬೇಕು ಮಗನೆ" ಎಂದು ಹೇಳಿದಾಗ "ಪ್ರೀತಿಗೆ ಜಾತಿಯಿಲ್ಲ. ಮುಕ್ರಿಸಾಬರೆ, ಸಾವಿಗೂ ಜಾತಿ ಇಲ್ಲ" ಎನ್ನುವುದು ಅದ್ರಾಮ.

ಹೌದು ಮನುಷ್ಯ ನಿರ್ಮಿಸಿಕೊಂಡಿರುವ ಈ ಜಾತಿ ಸಮಾಜದಲ್ಲಿ ಪ್ರೀತಿ ಪ್ರೇಮಕ್ಕೆ ಬೆಲೆ ಇಲ್ಲ. ಆದರೆ ಅದನ್ನು ಮೀರಿ ಹೋದರೆ ಧರ್ಮವೆಂಬ ಚೌಕಟ್ಟಿನ ಹಿನ್ನೆಲೆಯಲ್ಲಿ ಬಂಧಿಸಲು ಪ್ರಯತ್ನಿಸುವರು. ಅಥವಾ ಧರ್ಮದ ಮುಂದೆ ಕುರುಡಾಗಿ ಪ್ರೀತಿಸುವವರನ್ನೇ ಕೊಲ್ಲುವರು. ಇಲ್ಲಿ ಅದ್ರಾಮ ದ್ರೌಪದಿಯರು ಯಾರ ಬೆದರಿಕೆ ಇಲ್ಲದೆ ಮದುವೆಯಾಗಿದ್ದಾರೆ. ಹಾಗೆಯೇ ಅದ್ರಾಮನ ಬಾಯಿಂದ ಅನುಭವದ ಮತ್ತೊಂದು ಹೊರಬರುವುದು. ಅದೇ ಪ್ರೀತಿಗೆ ಹಾಗೂ ಸಾವಿಗೆ ಜಾತಿಯಿಲ್ಲ ಎಂದು, ಎರಡರ ನಡುವೆಯೂ ತಾರತಮ್ಯವಿಲ್ಲದ ಈ ಪ್ರೀತಿ ಹಾಗೂ ಸಾವು ಯಾರನ್ನು ಯಾವುದನ್ನು ಕಾಯುವುದಿಲ್ಲ ಎಂದಿದ್ದಾನೆ. ಇದರಿಂದ ಮನನೊಂದ ಮುಸ್ಲಿಂ ಜಾತಿಯ ಸಮುದಾಯದವರು ಅದ್ರಾಮನನ್ನು ಹೊರಹಾಕುತ್ತಾರೆ. ಕೆಲ ತಿಂಗಳ ತರುವಾಯ ಅದ್ರಾಮ ಪರದೇಶಿ ವಸ್ತ್ರ ಬಹಿಷ್ಕಾರ ಸಂದರ್ಭದಲ್ಲಿ ಬಲಿಯಾದಾಗ ತಂದೆ ಮೈದಿನ್ ಬ್ಯಾರಿ ಇವನು ನನ್ನ ಮಗನಲ್ಲ ಎಂದರೆ ಜಮಾತಿನವರು ಜಮಾತಿಗೂ ಅವನಿಗೂ ಸಂಬಂಧವೇ ಇಲ್ಲ ಎನ್ನುವರು. ಆದರೆ ಸ್ನೇಹಕ್ಕೆ ಮಾನವ ಪ್ರೇಮಕ್ಕೆ ಎಂದೂ ಜಾತಿ ಅಡ್ಡಬರುವುದಿಲ್ಲ. ಆದ್ದರಿಂದಲೇ ಅದ್ರಾಮನ ಶವಸಂಸ್ಕಾರವನ್ನು ಗುತ್ತಿನೊಡೆಯರು ತಮ್ಮ ಮನೆಯ ಬಂಟನೆಂಬಂತೆ ವಿಧಿವತ್ತಾಗಿ ಆಚರಿಸುವರು. ಕೊರಗರ ಐತುವಿನಿಂದ ಹಿಡಿದು ಪುಟ್ಟಮ್ಮಕ್ಕನವರೆಗೂ ಬಂದು ಹೋಗುತ್ತಾರೆ. ಬೊಜ್ಜವನ್ನು ಸಹ ನಡೆಸಿ ಅವನ ಆತ್ಮಕ್ಕೆ ಶಾಂತಿಯನ್ನು ಕೋರುವರು.

ಈ ಕಾದಂಬರಿಯಲ್ಲಿ ಜಾತಿ ವಿಷಮತೆಯ ಪದರುಗಳನ್ನು ಬಿಚ್ಚುತ್ತಾ ಪ್ರತಿಭಟನೆಯಲ್ಲಿ ಅಂತ್ಯಗೊಳ್ಳುತ್ತದೆ.

ಅದ್ರಾಮನು ಗಾಂಧಿ ವಿಚಾರಧಾರೆಗಳಿಂದ ಪ್ರಭಾವಿತನಾಗಿ ವಿಧವೆ ದ್ರೌಪದಿಗೆ ಬಾಳನ್ನು ನೀಡಿ ಗಾಂಧಿ ಕನಸನ್ನು ಸಾಕಾರಗೊಳಿಸಿದರೆ ಅದೇ ರೀತಿ ಅದ್ರಾಮನ ಗೆಳೆಯ ಮಾರಪ್ಪ ಶಿಖಂಡಿ ದಾರುವಿಗೆ ಬಾಳನ್ನು ನೀಡಿ ಸಾಮಾಜಿಕ ಕ್ರಾಂತಿಗೆ ನಾಂದಿ ಹಾಡಿದರು.

ಮಾರಪ್ಪನು ಸೂರಕ್ಕೆಯ ಮಗನಾಗಿದ್ದು, ಗಾಂಧಿವಿಚಾರಗಳಿಂದ ಕಾರ್ನಾಡ ಪ್ರಭಾವದಿಂದ ಸ್ವರಾಜ್ಯಕ್ಕಾಗಿ ಹಂಬಲಿಸುತ್ತಾ ಊರೂರು ಅಲೆಯುತ್ತಾ ಜನರನ್ನು ಸ್ವಾತಂತ್ರ್ಯಕ್ಕಾಗಿ ಹೋರಾಡಲು ಸಂಘಟಿಸುತ್ತಿದ್ದ ಜೊತೆಗೆ ಚಳುವಳಿಯಲ್ಲಿ ಪಾಲ್ಗೊಂಡು, ಖಾದಿ ಪ್ರಚಾರವನ್ನು ಮಾಡುತ್ತಾ ಸಮಾಜದ

ಮೌಢ್ಯ ಆಚರಣೆಗಳ ವಿರುದ್ಧ ಹೋರಾಡಿ ಸಾಮಾಜಿಕ ಸಮಾನತೆಯನ್ನು ತರುವಲ್ಲಿ ಈತನ ಪ್ರಯತ್ನ ಅನನ್ಯವಾದುದು. ಪರದೇಶಿ ವಸ್ತ್ರಗಳನ್ನು ಬಹಿಷ್ಕರಿಸುವಂತೆ ಹೇಳಿ ಎಲ್ಲರೂ ಸಹ ಖಾದಿ ಉಪಯೋಗಿಸಲು ಹಾಗೂ ಜನರಿಗೆ ತಾವೆ ನೂಲಲು ಮಾರಪ್ಪ ಊರೂರು ಅಲೆಯುತ್ತಿದ್ದನು. ಆದರೆ ಎಲ್ಲರೂ ನಿರಾಸಕ್ತಿ ತೋರಿಸುತ್ತಿದ್ದರು. ಬೆಸ್ತರ ಕೇರಿಗೆ ಹೋದಾಗ ಅಲ್ಲಿನ ಹೆಂಗಸರು "ನಾವೇನು ಹಾಳು ಹರಟೆ ಕೊಚ್ಚಲು ನಿಮ್ಮ ಗುತ್ತಿನ ಮನೆಯ ಹೆಂಗಸರಾ ? ಮತ್ತೆ ಮೀನು ಒಣಗಿಸುವುದಕ್ಕೆ ಮಾರುದ್ದಕ್ಕೆ ಬೆಲೆ ನೇಯುವುದಕ್ಕೆ ನಿಮ್ಮಪ್ಪ ಬರ್ತಾನಾ ? ಎಂದು ಮಾರಪ್ಪ ಮರು ಮಾತನಾಡದಂತೆ ಮಾಡುತ್ತಾರೆ. ಆದರೆ ಆತ ಕೋಪದಿಂದ ಬದಲಾವಣೆ ಸಾಧ್ಯವಿಲ್ಲ ಬದಲಾಗಿ ಪ್ರೀತಿಯಿಂದ ಸಾಧ್ಯ ಎಂದು ನಂಬಿದವನಾಗಿರುತ್ತಾನೆ. ಏಕೆಂದರೆ ಗಾಂಧಿಯ ಮೂಲಮಂತ್ರವೆ ಅಹಿಂಸೆ, ಮಾರಪ್ಪ ಮನೆ, ಗದ್ದೆ, ತಾಯಿ ಎನ್ನದೆ ಯಾವುದೇ ಜವಾಬ್ದಾರಿಯಿಲ್ಲದೆ ವಯಸ್ಸಾಗುತ್ತಿದ್ದರೂ ಸಹ ಮದುವೆಯಾಗದೆ ಖಾದಿ ಪ್ರಚಾರ, ಗಾಂಧಿ ಎಂದು ಉರೂರು ಅಲೆಯುವ ಮಗನ ರೀತಿ ಕಂಡು ತಾಯಿ ಸೂರಕ್ಕ ಗೊಣಗಾಡುತ್ತಾಳೆ. ಆದರೆ ಮಾರಪ್ಪ ಇದ್ಯಾವುದಕ್ಕೂ ತಲೆಕೆಡಿಸಿಕೊಳ್ಳದೆ ಜಾರಿಗೆ ಬೆಟ್ಟಿನ ಸುಬ್ಬಯ್ಯ ಶೆಟ್ಟರ ಶಿಖಂಡಿ ಮಗಳು ದಾರುವನ್ನು ವರಿಸಲು ನಿರ್ಧರಿಸುತ್ತಾನೆ.

ಕಾರ್ನಾಡರ ಉಪದೇಶದ ಪ್ರಭಾವಿರಬೇಕು ಅಥವಾ ಛಲವಿರಬೇಕೆಂದು ಮಾರಪ್ಪನ ನಿರ್ಧಾರವನ್ನು ತನ್ನದಲ್ಲದ ತಪ್ಪಿಗೆ ಶಿಖಂಡಿ ಪಟ್ಟ ಹೊತ್ತ ಮಾನಸಿಕವಾಗಿ ಖಿನ್ನತೆ ಅನುಭವಿಸುತ್ತಾ ಸಾಮಾಜಿವಾಗಿ ಮುಖಭಂಗ ಅನುಭವಿಸುತ್ತಿರುವ ದಾರುವಿಗೆ ಒಂದು ಜೀವನ ನೀಡಿ ಆಕೆಗೂ ಸಹ ಎಲ್ಲರಂತೆ ಬದುಕುವ ಸನ್ನಿವೇಶ ನಿರ್ಮಾಣಕ್ಕೆ ಮಾರಪ್ಪ ಕಾರಣನಾದನು. ಈ ನಿರ್ಧಾರ ಅಂದಿನ ಸಾಮಾಜಿಕ ಕ್ರಾಂತಿಯ ಒಂದು ಬಹುದೊಡ್ಡ ಭಾಗವಾಯಿತು.

ಈ ಕಾದಂಬರಿಯ ಮತ್ತೊಂದು ಪ್ರಮುಖ ಸಾಮಾಜಿಕ ಬದಲಾವಣೆ ಎಂದರೆ ಸಹಪಂಕ್ತಿ ಭೋಜನ. ಹೌದು ೧೯ನೇ ಶತಮಾನದ ೨ರಲ್ಲಿ ೩ನೇ ದಶಕದಲ್ಲಿ ಬರುವ ಈ ಸನ್ನಿವೇಶದಲ್ಲಿ ಬ್ರಾಹ್ಮಣರ ಹಿಡಿತ ಜೋರಾಗಿದ್ದು ಇತರ ವರ್ಗಗಳು ನಿರ್ಲಕ್ಷ್ಯಕ್ಕೆ ಒಳಪಟ್ಟಿದ್ದವು. ಅಂತಹ ಸಂದರ್ಭದಲ್ಲಿ ಮಾರಪ್ಪ ಮತ್ತು ತಿಂಗಳಾಯರು ಜೊತೆಗೂಡಿ ಬ್ರಾಹ್ಮಣರ ಜೊತೆಗೆ ಶೂದ್ರರು ಸಹ ಕುಳಿತು ಭೋಜನ ಮಾಡಬೇಕೆಂದು ಹೇಳಿದಾಗ ಇದನ್ನು ವಿರೋಧಿಸಿ ಬ್ರಾಹ್ಮಣರು ಯಾರಿಗೂ ತಿಳಿಯದಂತೆ ಭೋಜನ ನಡೆಸಿದರು. ನಂತರ ಶೆಟ್ಟರು, ಕೊರಗರು, ಮುಂಡಾಲರು, ಮಂಗೇರರು, ಪೂಜಾರಿಗಳು, ಮೂಲ್ಯರು, ಮೈಲಿಗಳು ಎಲ್ಲರೂ ಸಹ ಊಟ ಮಾಡಿ ನಂತರ ನಾವು ಮೇಲು, ನೀವು ಕೀಳು ಎನ್ನುತ್ತಾ ಜಗಳವಾಡಿದರು. ಇದರಿಂದ ಕಂಗಲಾದ, ಮಾರಪ್ಪ ಮತ್ತು ತಿಂಗಳಾಯರು ಅಸ್ಪೃಶ್ಯ ನಿವಾರಣೆಗೆ ಸಾಮಾಜಿಕ ಜಾಗೃತಿಯೊಂದೆ ದಾರಿ ಎಂದು ಆ ವಿಷಯಕ್ಕೆ ತಿಲಾಂಜಲಿ ಇಟ್ಟರು. ಆದರೆ ಎಲ್ಲರೂ ಸಹ ಒಂದೆ ಎಂಬ ಸರ್ವಸಮಾನತೆಯ ಕನಸನ್ನು ನನಸು ಮಾಡುವ ಉತ್ಸಾಹದಲ್ಲಿ ಮಾರಪ್ಪ ಹಾಗೂ ತಿಂಗಳಾಯರು ಹಗಲಿರುಳು ಶ್ರಮಿಸುತ್ತಿದ್ದರು. ಇದರಿಂದಲೇ ಐತುವಿನ ಮನಸ್ಸು ಸಂಪೂರ್ಣವಾಗಿ ಗಾಂಧಿಯ ಕಡೆ ವಾಲಿತೆನ್ನಬಹುದು.

ಇದಲ್ಲದೆ ಗಾಂಧಿಯವರ ಸ್ವರಾಜ್ಯ ಕನಸನ್ನು ನನಸು ಮಾಡಲು ಬೇಕಾಗಿರುವ ಹಣಕ್ಕಾಗಿ ಮಾರಪ್ಪ ಹಾಗೂ ತಿಂಗಳಾಯರು ಊರೂರು ಸುತ್ತಿ ಗಾಂಧಿನಿಧಿಗೆ ಹಣ ಸಂಗ್ರಹಿಸಲು ತೊಡಗಿ ಹೆಬ್ಬಾರರಿಂದ ಹಿಡಿದು ಗುತ್ತಿನೊಡೆಯರು ಮುಂತಾದ ಹಲವಾರು ಜನರ ಬಳಿ ತೆರಳಿದಾಗ ಕೆಲವರು ನೀಡಲು ಒಪ್ಪಿದರೆ ಹೆಬ್ಬಾರರು ನಾನೆ ಸ್ವತಃ ಬಂದು ನೀಡುತ್ತೇನೆ ಎಂದರಲ್ಲದೆ ೧೦ ರೂಪಾಯಿ ನೀಡುತ್ತಾರೆ. ಅದೂ ಸಹ ನಾರಾಯಣಭಟ್ಟರು ಗಾಂಧಿನಿಧಿಗೆ ೨೦ರೂ ನೀಡಿ ಎಂದು ಹೆಬ್ಬಾರರ ಕೈಗೆ ತಮ್ಮ ಹಣ ನೀಡಿದರೆ ಹೆಬ್ಬಾರರು ತಮ್ಮ ಕಪಟ, ಮೋಸತನದಿಂದ ಅದರಲ್ಲೇ ತಮ್ಮದೆಂದು ೧೦ ರೂ. ನೀಡುವುದಲ್ಲದೆ ಗುತ್ತಿನ ಶೆಟ್ಟರು ತಾವು ಬರಲಾಗುವುದಿಲ್ಲ. ಎಂದೇಳಿ ಗಾಂಧಿನಿಧಿಗೆ ಒಡವೆ ನೀಡಲು ನೀಡಿದರೆ ಹೆಬ್ಬಾರರು ಅದನ್ನು ಪುಟ್ಟಮ್ಮಕ್ಕನಿಗೆ ತಮ್ಮ ಪ್ರೇಮದ ಕಾಣಿಕೆಯಾಗಿ ನೀಡುತ್ತಾರೆ. ಇದನ್ನೆಲ್ಲ ತಿಳಿದ ಮಾರಪ್ಪ, ಅದ್ರಾಮ ಹೆಬ್ಬಾರರ ಮೇಲೆ ಕುಪಿತಗೊಳ್ಳುವರು. ಆದರೆ ಸ್ವರಾಜ್ಯವೆನೆಂದೆ ತಿಳಿಯದ ಗಾಂಧೀ ಯಾರು? ಆತನ ತತ್ವಗಳೇನೆಂದೆ ಅರಿಯದ ಮುಗ್ಧ ಶೂದ್ರ ಮಕ್ಕಳಾದ ಪಿಜಿನಮೂಲ್ಯ ಗಾಂಧಿನಿಧಿಗೆ ತನ್ನ ಬೆಳ್ಳಿಮುರುವನ್ನು ನೀಡಿದಾಗ ಮಾರಪ್ಪ ಬಾಚಿ ಆತನನ್ನು ತಬ್ಬಿ "ನೀನು ಕಳ್ಳು-ಗಂಗಸರ ಕುಡಿಯುವುದನ್ನು ಕಮ್ಮಿ ಮಾಡು. ಅದೇ ನೀನು ಗಾಂಧಿಗೆ ಕೊಡುವ ವಂತಿಕೆ" ಎಂದು ಬುದ್ಧಿವಾದ ಹೇಳುತ್ತಾ ಅದನ್ನು ಮತ್ತೆ ಸ್ವತಃ ಕಿವಿಗೆ ತೊಡಿಸುವನು. ಅಂತಪ್ಪ, ಕೂಸಮ್ಮೈಲಿ, ಅಂಗರಮೂಲ್ಯ ತಾವು ಕೂಡಿಟ್ಟ ಒಂದೂವರೆ ರೂಪಾಯಿ ನೀಡಿದರೆ ಹೆಬ್ಬಾರರ ಮಗಳಾದ ವಿಧವೆ ದ್ರೌಪದಿ ಮೂರು ಚಿನ್ನದ ಗುಂಡಿಯಿರುವ ಸರಪಳಿಯನ್ನು ನೀಡುತ್ತಾಳೆ. ಮಾರಪ್ಪ ಶೂದ್ರ ಮಕ್ಕಳ ಹಾಗೂ ದ್ರೌಪದಿಯ ದಾನಗುಣಗಳನ್ನು ಕಂಡು ಮೂಕವಿಸ್ಮಿತನಾದುದಲ್ಲದೆ ಹೆಬ್ಬಾರರ ನೀಚತನಕ್ಕೆ ನಾಚುವನು.

ಈ ಕಾದಂಬರಿಯಲ್ಲಿ ಬರುವ ಮತ್ತೊಂದು ಪಾತ್ರ ಪುಟ್ಟಮ್ಮಕ್ಕ ಇವರು ರೋಗಪೀಡಿತ ಗಂಡನಿಗಾಗಿ ಗಾಂಧಿ ನೋಡುವ ಆಸೆಯನ್ನು ಮರೆಯುವರು. ಗಾಂಧಿನಿಧಿಗೆ ಒಡವೆಯನ್ನು 'ಗುತ್ತಿನೊಡೆಯರ ಕೈಗಿಟ್ಟು ತನ್ನ ಮನೋವ್ಯಥೆಯನ್ನು ಹೇಳಿಕೊಳ್ಳುವರು. ಪುಟ್ಟಮ್ಮಕ್ಕನವರ ಚಿಂತೆ ರೋಗಪೀಡಿತ ಗಂಡನ ದೈಹಿಕ ನೋವಿಗಿಂತ ಮಾನಸಿಕ ನೋವನ್ನು ಮರೆಮಾಚಬೇಕೆಂದು ತಿಳಿದು ಗಾಂಧಿಗಿಂತ ಗಂಡಮುಖ್ಯನೆಂದು ಭಾವಿಸುವ ಮನೋಭಾವ ಗಮನಿಸುವಂತದ್ದು, ಇಲ್ಲಿ ಕಂಡುಬರುವ ವಿಚಾರವೆಂದರೆ ನಾರಾಯಣಭಟ್ಟರು ತನ್ನ ಪತ್ನಿಗಿಂತ ತನ್ನ ಉದ್ಯೋಗ ಮೇಲೆಂದು ಭಾವಿಸಿ ಪತ್ನಿಯನ್ನು ಬಿಟ್ಟು ಮಲೆಯಾಳಕ್ಕೆ ತೆರಳಿದರೂ ಸಹ ವಾಪಸ್ಸು ರೋಗಪೀಡಿತನಾಗಿ ಬಂದಾಗ ಪತ್ನಿ ಅವರನ್ನು ಸ್ವೀಕರಿಸುವುದು ಹೆಣ್ಣಿನ ಮನಸ್ಥಿತಿಗೆ ಹಿಡಿದ ಕನ್ನಡಿಯಾಗಿದೆ.

ಈ ಕಾದಂಬರಿಯಲ್ಲಿ ಸಾಮಾಜಿಕ ಬದಲಾವಣೆಗೆ ಹಿನ್ನೆಲೆಯೊದಗಿಸುವ ಮತ್ತೊಂದು ಪ್ರಮುಖ ಕ್ರಾಂತಿಕಾರಕ ಅಂಶಗಳೆಂದರೆ ಖಾದಿಪ್ರಚಾರ, ಮಧ್ಯಪಾನ ನಿಷೇಧಚಳುವಳಿ, ಉಪ್ಪಿನ ಸತ್ಯಾಗ್ರಹ, ಪರದೇಶಿ ವಸ್ತ್ರ ಬಹಿಷ್ಕಾರ ಮುಂತಾದವು. ಇವುಗಳನ್ನು ಮಾರಪ್ಪ ತಿಂಗಳಾಯರು, ಅದ್ರಾಮ ಸೇರಿಕೊಂಡು ಜನರಲ್ಲಿ ಅರವು ಮೂಡಿಸಿ ಸಂಘಟಿಸುವ ಪ್ರಯತ್ನದಲ್ಲಿ ಅವರ ಪಾತ್ರ ಹಿರಿದಾದುದು.

ಮಧ್ಯಪಾನ ನಿಷೇಧ ಚಳುವಳಿಯನ್ನು ನಡೆಸುವುದರಿಂದ ಶೂದ್ರಜನರ ಸ್ಥಿತಿಗತಿ ಹಾಗೂ ಸರ್ಕಾರಕ್ಕೆ ಆಗುತ್ತಿರುವ ಮೋಸವನ್ನು ತಪ್ಪಿಸಿದಂತಾಗುವುದು. ಮಾರಪ್ಪ, ತಿಂಗಳಾಯರು ಈ ಚಳುವಳಿಯ ನಡೆಸಿ ಅಂತಪ್ಪ, ಕೂಸಾಮೈಲಿ, ಪಿಜಿನಮೂಲ್ಯ ಮುಂತಾದವರು ಮಧ್ಯಪಾನ ತ್ಯಜಿಸಿ ಆ ಹಣವನ್ನು ಕೂಡಿಟ್ಟು ಗಾಂಧಿನಿಧಿಗೆ ಅರ್ಪಿಸುವರು. ಜೊತೆಗೆ ಪೇಟೆಯಲ್ಲಿ ಸೇಂದಿಯಂಗಡಿ ಮುಂದೆ ಕುಳಿತು ಘೋಷಣೆ ಕೂಗಿದರು. ಇದರಂತೆಯೇ ಉಪ್ಪಿನ ಸತ್ಯಾಗ್ರಹದಲ್ಲಿ ಭಾಗವಹಿಸಿ ಮಾರಪ್ಪ ಮತ್ತು ತಿಂಗಳಾಯರು ಪ್ರತಿಭಟನೆ ನಡೆಸುವರು. ನಮ್ಮ ಮನೆಯೆದುರಿನ ಕಡಲೇನು ಆ ಪರಂಗಿಯವರ ಸೊತ್ತೆ ! ನಮ್ಮ ಕಡಲಿನ ಉಪ್ಪು ತಿನ್ನಲು ನಾವು ತೆರಿಗೆ ಕಟ್ಟಬೇಕಾ ? ಎಂಬುದು ಅವರ ನಿಲುವು. ಸದಾಶಿವರಾಯರು ಅಂಕೋಲೆಯಲ್ಲಿ ನಡೆಯುವ ಸತ್ಯಾಗ್ರಹಕ್ಕೆ ಭಾಗವಹಿಸಲು ತೆರಳಿದ್ದರು. ಆದರೆ ಇತ್ತ ಮಾರಪ್ಪನ ಬಂಧನವಾಗಿ ಬಿಡುಗಡೆಯಾಗುತ್ತದೆ. 

ಈ ಕಾದಂಬರಿಯ ಬಹುದೊಡ್ಡ ಚಳುವಳಿಯಾಗಿ ಸ್ವಾಭಿಮಾನದ ಸಂಕೇತವಾಗಿ ಖಾದಿವಸ್ತ್ರ ಕಾಣಿಸಿಕೊಂಡಿದೆ. ಮಾರಪ್ಪನಂತೂ "ಖಾದಿಯೆ ನನ್ನ ಹೆಂಡತಿ, ದೇಶವೆ ನನ್ನ ತಾಯಿ" ಎಂದು ತಿಳಿದು ಊರೂರು ಸುತ್ತಿ ತನ್ನ ಖಾದಿಯನ್ನು ಪ್ರಚಾರ ಪಡಿಸಿ ಎಲ್ಲರೂ ಸೇರಿ ನೂಲುವಂತೆ ತಿಳಿಸಿದಾಗ ಬೆಸ್ತರ ಹೆಂಗಸರು ವಿರೋಧಿಸಿದಾಗ ಮಾರಪ್ಪ ನಗುತ್ತಲೇ ಹೊರಡುವನು. ಇಲ್ಲಿ ಖಾದಿ ಪ್ರಚಾರ ಮಾಡಿ, ಖಾದಿಯನ್ನು ತಾವೆ ನೇಯುವಂತೆ ಮಾಡಿ ಖಾದಿ ಉಡುಗೆಯನ್ನು ಧರಿಸುವಂತೆ "ಗಾಂಧಿಬಂದ" ಕಾದಂಬರಿಯಲ್ಲಿ ಪ್ರಸ್ತಾಪವಾಗಿದೆ. ಇದರಿಂದ ಕಾದಂಬರಿಯಲ್ಲಿ ಖಾದಿ ಪ್ರಚಾರ ವ್ಯಾಪಕವಾಗಿ ಬಳಕೆಯಾಗಿದೆ. ಆದರೆ ಹಳ್ಳಿಯ ಸಾಮಾನ್ಯ ಜನರು ಮಾತ್ರ ಖಾದಿ ನಮ್ಮದೋ ಅಲ್ಲವೋ ಕಡಿಮೆ ಬೆಲೆಯ ಬಟ್ಟೆಯಾದರೆ ಆಯಿತೆಂಬ ಮನೋಭಾವ ಅವರದಾದೆ ಸೊನಕ್ಕೆಯವರು ಇದು ರಟ್ಟಿನ ರೀತಿ ಇದೆ. ಇದನ್ನು ತೊಡಲು ಆಗುವುದಿಲ್ಲ. ಬದಲಿಗೆ ಮಲಗುವ ಹಾಸಿಗೆಗೆ ಹೊದಿಕೆಯಾಗುತ್ತದೆ ಎನ್ನುವರು. ಇನ್ನು ರುಕುಣಿಯನ್ನು ಖಾದಿಯ ಬಗ್ಗೆ ತಿರಸ್ಕಾರ ತೋರಿದರೂ ಸಹ ಮಾರಪ್ಪ ಮರೆಯಾದ ಮೇಲೆ ಎರಡು ಖಾದಿ ಸೀರೆಯನ್ನು ಕದಿಯುವಳು. ಆದರೆ ಮಗ ಹಯವದನ ಕದ್ದ ಸೀರೆಯನ್ನು ತಾಯಿಗೆ ತಿಳಿಯದಂತೆ ಪುನಃ ಅಲ್ಲಿಗೆ ಕೊಂಡೊಯ್ದು ಇಡುವನು. ಹೀಗೆ ಸಾಮಾನ್ಯ ಜನರಿಂದ ಬ್ರಾಹ್ಮಣವರ್ಗದವರಿನವರೆಗೂ ಖಾದಿ ತಿರಸ್ಕಾರಕೆಕ ಒಳಗಾಗುತ್ತದೆ. ಆದರೆ ಕಾದಂಬರಿಯ ಕೊನೆ ಕೊನೆಗೆ ದಾರು, ದ್ರೌಪದಿ ಊರಿನ ಇತರ ವರ್ಗದ ಜನರು ಖಾದಿ ನೂಲುವರು.

ಪರದೇಶಿ ವಸ್ತ್ರ ಬಹಿಷ್ಕಾರ ಚಳುವಳಿಯು ಪೇಟೆಯಲ್ಲಿ ವಿದೇಶಿ ಬಟ್ಟೆಗಳನ್ನೆಲ್ಲಾ ಬೆಂಕಿಗೆಹಾಕಿ "ಏಕೆ ಧಿರಿಸುವೆ ಸಾಕುಬಿಡು ಪರದೇಶಿ ಜನರ ವಸ್ತ್ರ ವಾ ಹಾಕು ಬೆಂಕಿಲಿ ಉರಿಲಿ ಧಗಧಗ ಧರಿಸು ಖಾದಿ ಪವಿತ್ರವ' ಎಂದು ಹಾಡುತ್ತಾರೆ.

ಅದ್ರಾಮ ಈ ಚಳುವಳಿಯಲ್ಲಿ ಉಂಟಾದ ಗಲಭೆಯಿಂದ ಸಾವನ್ನಪ್ಪುತ್ತಾನೆ. ಪರದೇಶಿ ವಸ್ತ್ರ ಬಹಿಷ್ಕಾರ ಚಳುವಳಿ ತೀವ್ರವಾಗುತ್ತದೆ.

ಮೇಲಿನ ಚಳುವಳಿಗಳು ಸ್ವಾತಂತ್ರ್ಯದ ಹಿನ್ನೆಲೆಯಲ್ಲಿ ನಡೆಯುತ್ತಿದ್ದರೂ ಸಹ ಸಾಮಾಜಿಕ ಹಕ್ಕು-ಬಾದ್ಯತೆ, ಮೇಲು-ಕೀಳು, ಅಸ್ಪೃಶ್ಯತೆ ಮುಂತಾದ ಅನಿಷ್ಟತೆಗಳ ವಿರುದ್ಧವೂ ಕೂಡ ಆಗಿತ್ತು ಎಂಬುದನ್ನು ಗಮನಿಸಬೇಕು.

"ಗಾಂಧಿಬಂದ" ಕಾದಂಬರಿಯ ಬಹುದೊಡ್ಡ ಪ್ರೇರಕಶಕ್ತಿಯಾದ ಮಹಾತ್ಮಗಾಂಧಿಯವರ ಪಾತ್ರ ಇಲ್ಲಿ ಬಹುಪ್ರಾಮುಖ್ಯತೆ ಪಡೆದಿದೆ. ಕಾರ್ನಾಡು ಸದಾಶಿವರಾಯರು, ಮಾರಪ್ಪ, ಅದ್ರಾಮ, ಗಾಂಧಿಯವರ ತತ್ವ ಆದರ್ಶಗಳಿಂದ ಪ್ರಭಾವಿತರಾಗಿ ಅಹಿಂಸೆ, ಸತ್ಯಾಗ್ರಹ, ಹರಿಜನೋದ್ಧಾರ, ಖಾದಿ ಪ್ರಚಾರ, ಮೊದಲಾದ ಗಾಂಧಿಜಿಯವರ ನಿಯಮಗಳನ್ನು ಹಳ್ಳಿ ಹಳ್ಳಿಯಲ್ಲಿ ಪ್ರಚಾರ ಮಾಡಲು ಪಣ ತೊಟ್ಟವರು. ಇಂತಹ ಮಹಾತ್ಮಗಾಂಧಿಯವರು ಮಂಗಳೂರಿಗೆ ಮೂರು ಬಾರಿ ಭೇಟಿ ನೀಡಿದ್ದಾರೆ. ಜಾತಿ ಭೇದ, ಸನಾತನ ಧರ್ಮದ ರೀತಿ-ನೀತಿ, ಖಾದಿ ಪ್ರಚಾರ, ಸ್ವರಾಜ್ಯವನ್ನು ಕುರಿತು ತಮ್ಮ ಭಾಷಣದಲ್ಲಿ ಗಾಂಧಿ ಹೇಳುತ್ತಾರೆ. "ಹಿಂದೂ-ಮುಸ್ಲಿಂ ವೈಷಮ್ಯ ಹೀಗೆ ಮುಂದುವರೆಯಬಾರದು. ನಾವೆಲ್ಲರೂ ಭಾರತವೆಂಬ ಸುಂದರ ತೋಟದಲ್ಲಿ ಅರಳಿರುವ ಹೂಗಳು. ಪರರು ಬಂದು ಈ ತೋಟವನ್ನಾಗಲೀ ಗುಲಾಬಿಯನ್ನಾಗಲಿ ಹಾಳುಗೆಡವಲು ನಾವು ಬಿಡಬಾರದು. ನಮ್ಮನಮ್ಮೊಳಗಿನ ವೈಷಮ್ಯವನ್ನು ಆದಷ್ಟು ಬೇಗ ತೊಡೆದು ಹಾಕಿ ನಾವು ಮಧುರ ಸಂಬಂಧ, ಬಾಂಧವ್ಯ ಬೆಳೆಸಿಕೊಳ್ಳಬೇಕೆಂಬುದೆ ನನ್ನ ಹಾರೈಕೆ ಎಂದರು".

ಸ್ವರಾಜ್ಯ ಪರರಾಜ್ಯ ಎಂಬ ಕನಿಷ್ಠ ತಿಳುವಳಿಕೆಯೂ ಇಲ್ಲದ ಹಲವಾರು ಕೆಳವರ್ಗದ ಜನತೆ ಗಾಂಧಿ ಒಬ್ಬಾತ ಅವತಾರ ಪುರುಷನೋ, ಸಮಾಜ ಪರವರ್ತಕನೋ ಎಂಬ ಕಲ್ಪನೆಯಿಂದಲ್ಲೇ ಗಾಂಧಿಗೆ ಶರಣು ಹೋಗುತ್ತಾರೆ. ಗಾಂಧಿಯನ್ನು ನೋಡಲು ಪೇಟೆಗೆ ಹೋಗಕೂಡದು ಎಂದು ಗದರಿಸಿದ ಹೆಬ್ಬಾರರಿಗೆ ಅಂತಪ್ಪ ಹೀಗೆ ಗೊಣಗಿಕೊಳ್ಳುತ್ತಾನೆ. ಆ ಗಾಂಧಿ ಒಮ್ಮೆ ಇವ್ರಿಗೆ ಹೀಗೆ ಕಣ್ಣು ಬಿಟ್ಟರೆಂದ್ರೆ ಸುಟ್ಟು ಭಸ್ಮ ಕೊರಗದ ಪಿತುವಿನಿಂದ ಪುಟ್ಟಮ್ಮಕ್ಕನವರೆಗೆ ಗಾಂಧಿನಿಧಿಗೆ ಹಣ ಒಡವೆಯನ್ನು ಅರ್ಪಿಸುವುದನ್ನು ಕಂಡಂತಹ ಗುತ್ತಿನೊಡೆಯರಿಗೆ ಆಶ್ಚರ್ಯವಾಗುತ್ತದೆ. ಈ ಗಾಂಧಿ ಅದೆಂಥಾ ಮೋಡಿಗಾರನೋ ಸಣ್ಣವರು ದೊಡ್ಡವರೆನ್ನದೆ ಮೇಲು ಕೀಳೆನ್ನದೆ ಎಲ್ಲಾ ಮನಸ್ಸಿಗೂ ಲಗ್ಗೆ ಹಾಕಿ ಹೀಗೆ ಕುಣಿಸುತ್ತಿದ್ದಾನಲ್ಲ ಎಂದು ಹೇಳುವಲ್ಲಿ ಯಾವುದೇ ಉತ್ಪ್ರೇಕ್ಷೆ ಕಂಡುಬರುವುದಿಲ್ಲ. ಈ ಕೃತಿಯಲ್ಲಿ ಜಾತಿ ಸಂಘರ್ಷವನ್ನು ಕುರಿತು ಪ್ರಸ್ತಾಪವಿದೆ. ಬ್ರಾಹ್ಮಣನು ಶ್ರೇಷ್ಠ ಆತ ಏನೂ ಮಾಡಿದರೂ ರಾಜಕೀಯ ಲಾಭದ ಉದ್ದೇಶಕ್ಕಾಗಿ ವ್ಯವಸ್ಥೆಗಳನ್ನು ರೂಪಿಸುತ್ತಾನೆ. ಪಟೇಲನಾದ ಈತ ಉಳಿದೆಲ್ಲ ವರ್ಗಗಳನ್ನು ತನ್ನ ಹಿಡಿತದಲ್ಲಿಟ್ಟುಕೊಳ್ಳಬೇಕೆಂದೂ ಅಹಂ ಇರುವವರು ಹಳ್ಳಿಯ ಶ್ರೀಮಂತರೆನಿಸಿದ ಪಾಂಡುಶೆಟ್ಟಿ, ತೌಡುಶೆಟ್ಟಿ ಇವರ್‍ಯಾರು ಹೆಬ್ಬಾರರಿಗೆ ಪ್ರತಿಯಾಗಿ ಮಾತನಾಡಲಿಚ್ಚಿಸುವವರಲ್ಲ. ಹಾಗೆಂದಾಕ್ಷಣ ಅವರೆಲ್ಲರೂ ಹೆಬ್ಬಾರರ ಮೇಲೆ ಭಯ, ಭಕ್ತಿ, ವಿಶ್ವಾಸ. ಗೌರವ ತುಂಬಿ ತುಳುಕುತ್ತಿದೆಯೆಂದಲ್ಲಿ ಸಾಕಷ್ಟು ಅಸಮಾಧಾನ, ಸಿಟ್ಟು, ಬೇಸರ, ಅವರೊಳಗಿದೆ ಬ್ರಾಹ್ಮಣ ಮೇಲ್ಜಾತಿ ಎಂಬ ದಾಕ್ಷಿಣ್ಯ ಹಾಗೂ ಜನಬಲ, ಹಣಬಲ, ತೋಳ್ಬಲಗಳಿರುವ ಪ್ರಬಲವಾದ ಬಂಟರ ಜಾತಿಗೆ ಸಂಧರ್ಭಾನುಸಾರಿಯಾದ ಬುದ್ದಿಬಲ ನೀಡುತ್ತಾರೆ ಎಂಬ ಕಾರಣಕ್ಕೂ ಏನೋ

ನೇರವಾಗಿ ಹೆಬ್ಬಾರರ ಮಾತಿಗೆ ಪ್ರತಿಯಾಡುವುದಿಲ್ಲ. ಇವರಿಗೆ ಕಂಬಳದ ಊಟದಲ್ಲಿನ ಪಂಕ್ತಿ ನ್ಯಾಯಾದ ಬಗ್ಗೆ ಅತೃಪ್ತಿ ಇದ್ದರೂ ಹೆಬ್ಬಾರರಿಗೆ ಹೇಳುವುದಿಲ್ಲ. ಕಂಬಳದ ಕೆಲಸಕ್ಕೆ ಇನ್ನಿಲ್ಲದಂತೆ ಜೀವ ತೇಯುವವರು ಶೂದ್ರರು. ಆದರೆ ಕಂಬಳದ ಕೋಣಗಳಂತೆ ಮರ್ಯಾದೆಯಿಂದ ಹೊಟ್ಟೆ ಬಿಗಿಯುವಷ್ಟು ಚಾವಡಿಯಲ್ಲಿ. ಕೂತು ಉಣ್ಣುವುದು ಮಾತ್ರ ಬ್ರಾಹ್ಮಣರು ಇದೆಂತಹ ನ್ಯಾಯ ಎಂದು ತಮ್ಮ ತಮ್ಮಲ್ಲೇ ಗೊಣಗಿಕೊಳ್ಳತ್ತಾರಷ್ಟೇ, ಆದರೆ ಜಾತಿ ಧರ್ಮವನ್ನು ಕುರಿತ ಕೃತಿ ಆಶಯ ವ್ಯಕ್ತವಾಗುವುದು. ಜನರ ಮಾತಿನಲ್ಲಿ ದೈವ ಜಮಾದಿ ಮುಸ್ಲಿಂ ಅದ್ರಾಮನಿಗೆ ಹೂಗಂಧ ನೀಡಿ ಹಾರೈಸಿದಾಗ ದೈವಕ್ಕೆ ಜಾತಿ ಬೇಧವಿಲ್ಲ. ಅದೆಲ್ಲ ಇರುವುದು ರಾಕ್ಷಸ ಜಾತಿಯ ಮನುಷ್ಯರಿಗೆ ಎಂದು ಹೇಳುವುದು ಸರ್ವಕಾಲಿಕ ಸತ್ಯವೆನಿಸುತ್ತದೆ.

ಸುಧಾರಣೆಗೆ ಸರ್ವಸಮಾನತೆಗೆ ಕೇವಲ ಬ್ರಾಹ್ಮಣ ಜಾತಿಯೇ ಅಡ್ಡಿಯಿಲ್ಲ ಶೂದ್ರವರ್ಣಗಳಲ್ಲೇ ತಾರತಮ್ಯ ಮನೋಭಾವನೆ ತೊಡೆದು ಹಾಕಲಾರದಷ್ಟು ಬಲವಾಗಿದೆ. ಮುಗೇರ, ಮೂಲ್ಯ, ಪೂಜಾರಿ, ಮೈಲಿ, ಆಚಾರಿ, ಬೆಸ್ತರು, ಶೆಟ್ಟರುಗಳೆನ್ನೆಲ್ಲ ದೇವಾಲಯದ ಒಳನುಗ್ಗಿಸಿ ಸಹಪಂಕ್ತಿಭೋಜನ ಏರ್ಪಡಿಸಿದ್ದರು. ಆದರೆ ಆ ಬ್ರಾಹ್ಮಣ ಶೂದ್ರ ಜಗತ್ತಿನೊಳಗೆ ಜಾತಿ ಭೇದಗಳ ವಿಷ ಬ್ರಾಹ್ಮಣರಿಗಿಂತ ಸ್ವಲ್ಪ ಹೆಚ್ಚಾಗಿಯೇ ಇದೆಯೆಂದು ಮೌನವಾದರು. ಈ ಅಂತಃ ಕಲಹವನ್ನು ಕಂಡು ಇದು ತಮ್ಮಿಂದ ತೊಳೆಯಲಾಗದ ಸಾಮಾಜಿಕ ಕೊಳೆ ಮುಂದೆಯೂ ಇರುತ್ತದೆ. ಇದನ್ನು ತಕ್ಷಣದಲ್ಲಿ ನಿವಾರಿಸಲು ಬರುವುದಿಲ್ಲವೆಂಬ ತಿಳುವಳಿಕೆ ವೇದ್ಯವಾಗುತ್ತದೆ. ಆದರೆ ಈ ಸಹಭೋಜನವನ್ನು ಮಾಡುವಂತೆ ಪ್ರೇಶಿಪಿಸಿದವರು ಗಾಂಧಿ ಎಂದು ತಿಳಿದು ಪಿತು ಅವರನ್ನು ಕಾಣಲು ಪರಿತಪಿಸುತ್ತಾನೆ. ಶೂದ್ರವರ್ಗದ ಪ್ರತಿನಿಧಿಯಾಗಿ ಸಹ ಪಂಕ್ತಿ ಭೋಜನವನ್ನು ಅಪ್ಯಾಯ ಮಾನ್ಯತೆಯಿಂದ ಒಪ್ಪಿಕೊಂಡವನು. ಪಿತುವೊಬ್ಬನೇ ಬೇರೆಯವರು ಗಾಂಧಿನಿಧಿಗೆಂದು ಕೂಡ ಹಣವನ್ನು ಹೆಬ್ಬಾರರು ಸ್ವಾಹ ಮಾಡಿದರೆ ಪಿಜನಮೂಲ್ಯ ತನ್ನ ಬೆಳ್ಳಿ ಮುರುವನ್ನು ಕೊಡಲು ಮುಂದಾಗುತ್ತಾರೆ. ಅಂತಪ್ಪ, ಕೂಸಮೈಲಿ, ಮಂಜಪ್ಪ ಕಳ್ಳ ಕುಡಿಯುವುದನ್ನು ನಿಲ್ಲಿಸಿ ಆ ಹಣವನ್ನು ಗಾಂಧಿನಿಧಿಗೆ ಅರ್ಪಿಸುವುದು ಜಾತಿಯಿಂದ ಮೇಲ್ವರ್ಗದವರೆನಿಸಿದ ಹೆಬ್ಬಾರರ ವ್ಯಕ್ತಿತ್ವವನ್ನು ನಾಚಿಸುವಂತಹದ್ದು.

ಅಂದರೆ ಗಾಂಧಿಯವರು ಯಾರಾದರೂ ಮಹಿಳೆಯರಿಗೆ ಈ ದರಿದ್ರ ನಾರಾಯಣನಿಗೆ ತಮ್ಮ ಒಡವೆ ಕೊಡಬೇಕೆಂದೂ ಅನಿಸಿದ್ದಲ್ಲಿ ಅದನ್ನು ಈ ಶುಭಗಳಿಗೆಯಲ್ಲಿ ಕೊಡಬಹುದು. ಆ ನಿಮ್ಮ ಒಡವೆಗಳು ದೇಶದ ಹದಿನಾರು ಸಾವಿರ ಬಡಸೋದರಿಯರಿಗೆ ಒಂದು ದಿನದ ಊಟ ಒದಗಿಸಬಲ್ಲದು ಎಂದು ಅನ್ನುತ್ತಿದ್ದಂತೆ ಹೆಂಗಸರೆಲ್ಲ ಭೂತೈತಾಳರ ಆರತಿ ತಟ್ಟೆಗೆ ಮುಗಿ ಬೀಳುವ ಭಕ್ತವೃಂದದಂತೆ ಗಾಂಧಿಯವರತ್ತ ಮುಗಿಬಿದ್ದರು. ಗಾಂಧಿಯವರು ಸಂತೋಷಚಿತ್ತದಿಂದ ಅದನ್ನು ಸ್ವೀಕರಿಸುತ್ತಿದ್ದರು.

ಅತ್ತ ಬ್ರಾಹ್ಮಣ ಸಮುದಾಯದವರಾದ ಹೆಬ್ಬಾರರ ಮನೆಯವರು ಗಾಂಧಿಯವರು ಆಭರಣ ಕೇಳುತ್ತಿದ್ದಂತೆ ಇತ್ತ ಸಭೆಯಲ್ಲಿ ತಳವೂರಿದ್ದ ರುಕುಣಿಯಮ್ಮ ಶಾರದಮ್ಮನವರಿಗೆ ಭಯದಿಂದ ಎದೆಯೊಳಗೆ ಉಸಿರು ಸಿಕ್ಕಿಹಾಕಿ ಕೊಂಡಂತಾಗಿತ್ತು ಗಾಂಧಿಯವರು ಹೆಂಗಸರ ಒಡವೆ ನೋಡಿದರೆ

ಸಂಕು ತಟ್ಟನೆ ಕರೆದುಬಿಟ್ಟು ಅವನ್ನೆಲ್ಲ ಕಳಚಿಕೊಡೆಂದೂ ಕೇಳುತ್ತಾರಂತೆ ಎಂದು ಯಾರೊ ಮೊದಲೇ ರುಕುಣಿಯಮ್ಮ ಹಾಗೂ ಶಾರದಮ್ಮನಿಗೆ ಭಯ ಹುಟ್ಟಿಸಿದ್ದರಿಂದ ಅವರಿಬ್ಬರೂ ಗಾಂಧಿಯ ಹೆಸರಿಕೆಯಿಂದ ಬಿಳುಚಿಕೊಂಡರು ಇದು ಅವರ ಮನಸ್ಸಿನ ಅಸಹಾಯತೆಯನ್ನು ತೆರೆದಿಡುತ್ತದೆ. ಹಾಗೂ ಮೇಲ್ಜಾತಿಯವರ ನಡೆಯುವ ರೀತಿ–ನೀತಿಯಿಂದ ಅಲ್ಪಜಾತಿಯವರ ಹಾಗೇ ಕಾಣಿಸುವಂತದ್ದು ಹಾಗೂ ಇದು ಅವರ ವ್ಯಕ್ತಿತ್ವಕ್ಕೆ ದಕ್ಕೆಯನ್ನುಂಟು ಮಾಡುತ್ತದೆ.

"ಶರೀರೆ ಛಿದ್ರ ಭೂತೇ ವ್ಯಾಧಿಗ್ರಸ್ಥೆ ಕಳೇರವೇ" "ಔಷಧಂ ಜಾಹ್ನವೀ ತೋಯಾ ವೈದ್ಯೋ ನಾರಾಯಣ ಹರೀ – ಎಂದು ಪಠಣ ಮಾಡುವ ಹೆಬ್ಬಾರರಿಗೆ ಶರೀರದ ಅನಿಶ್ಚಿತತೆಯ ಅರಿವೆ ಇಲ್ಲ.

ಪ್ರತಿ ಯುಗಾದಿಗೆ ಹಸಿರು ತರಕಾರಿ ಹೊರೆ ಕಾಣಿಕೆ ಜೊತೆ ತಾವು ಕೇಳಿದಷ್ಟು ಅಕ್ಕಿ ಮುಡಿ ಮನೆಗೆ ಬಂದು ಬಿದ್ದರೆ ಸಾಕು. ಯುಗಾದಿಯ ಹಬ್ಬಕ್ಕೆ ಸಿದ್ದತೆ ನಡೆಯುತ್ತಿದ್ದಂತೆ ಪ್ರಭವ ಸಂವತ್ಸರ ಮುಗಿದು ವಿಭವವೂ ಸಂವತ್ಸರವೂ ಕಾಲಿಟ್ಟಿತ್ತು. ಯುಗಾದಿಯ ಆಚರಣೆ ಕೊಂಕಣಿಗಳದ್ದು ಆ ಯುಗಾದಿಯ ಹಿಂದೆಯೇ ಬ್ರಾಹ್ಮಣರ ಹಾಗೂ ಅವರಡಿ ಇರುವ ಇತರ ಸಮಸ್ತ ಶೂದ್ರರ ಯುಗಾದಿಯು ಬಂದಿತು. ಅಂದು ಹೆಬ್ಬಾರರ ಅಂಗಳದಲ್ಲಿ ಮಾಮುಲು ಬಿಡಿ ಒಕ್ಕಲಿನವರಲ್ಲದೆ, ಮೂಲಗೇಣಿ, ಬಾಲಗೇಣಿ, ಒಕ್ಕಲಿನವರ ಬಿರುಸಿನ ಓಡಾಟವಿತ್ತು. ಹೆಬ್ಬಾರರು ಪ್ರಾತಃ ಸಂಧ್ಯಾವಂದನೆ ಮುಗಿಸಿ, ನಿತ್ಯದ ಪೂಜೆ ಮಾಡುತ್ತಿದ್ದಾರೆ. ಆ ನಿತ್ಯದ ಪೂಜೆ ಮುಗಿದೊಡನೆ ಮತ್ತೊಂದು ಯುಗಾದಿಯ ವಿಶೇಷ ಪೂಜೆಯಿದೆ ಅಂದರೆ ಮಾರನೆದಿನ ಗೇಣಿಗೆ ಸಂದಾಯ ಮಾಡುವ ದಿನವಾಗಿರುತ್ತದೆ.

ಹೆಬ್ಬಾರರು ಯುಗಾದಿಯ ಹಬ್ಬವನ್ನು ವಿಶೇಷವಾಗಿ ಆಚರಿಸಿದರು ನಂತರ ಬಂಗಾರದಂಚಿನ ಮುತ್ತಿನ ಬಣ್ಣದ ದೋತ್ರದ ಮೇಲೆ ಅದೇ ಬಣ್ಣದ ರೇಷ್ಮೆ ನಿಲುವಂಗಿ ಧರಿಸಿಕೊಂಡು ಒಳಗಿಂದ ಗುಟುಕು ಹಾಕಿಕೊಂಡು ಚಾವಡಿಗೆ ಬಂದು ತನ್ನ ಒಕ್ಕಲ ಮಕ್ಕಳ ಗೇಣಿ ಪತ್ರಗಳಿರುವ ಪಿಠಾರಿಯನ್ನು ಬಿಡಿಸಿಟ್ಟರು. ಲೆಕ್ಕಪತ್ರ ತೆಗೆಯುದಕ್ಕಿಂತ ಮೊದಲು ಒಮ್ಮೆ ಜಿರಲೆಗಳ ದಿಗಿಣ ನಡೆಯಿತು. ಹೆಬ್ಬಾರರ ದೋತ್ರದೊಳಗೊಂಡು ಜಿರಲೆ ನುಗ್ಗಿ ಇನ್ನಿಲ್ಲದ ದಾಂಧಲೆ ನಡೆಸಿ ಅಂಗಳದಲ್ಲಿದ್ದ ಆಳುಗಳಿಗೆ ಪುಕ್ಕಟೆ ಮನರಂಜನೆ ನೀಡಿತು. ಆಳುಗಳು ತಮಗೆ ಉಕ್ಕಿ ಬರುವ ನಗುವನ್ನು ಅಲ್ಲೇ ಬಿಗಿದಿಟ್ಟುಕೊಂಡು ಗಂಟು ಮುಖದಲ್ಲೇ ಚಾವಡಿಯ "ವೈಭವ"ವನ್ನು ದಿಟ್ಟಿಸಿದರು. ಜಿರಲೆಗಳ ವಿಲೇವಾರಿಯಾದೊಡನೆ ಹೆಬ್ಬಾರರು ಲೆಕ್ಕಪತ್ರಗಳಿಗೆ ಮುಖಕೊಟ್ಟರು.

ಒಡೆಯನ ಧೂರ್ತತೆಯ ಅರಿವಿದ್ದರೂ ಒಡೆಯಲಾಗದೊಂದು ಒಡವೆ ಎಂದು ತೆಪ್ಪಗಾಗುತ್ತಿದ್ದರು. ಈ ಮಾರಶೆಟ್ಟಿಯ ಪ್ರಭಾವದಿಂದ ತಮ್ಮ ಧಣಿಗಳಾದ ಹೆಬ್ಬಾರರು ವಿರೋಧಿಸಿಯಾದರೂ ಗಾಂಧಿ ಟೊಪ್ಪಿಯನ್ನು ತೊಡುತ್ತಾರೆ. ಗಾಂಧಿ ಇನೇ ಬಾರಿ ಮಂಗಳೂರಿಗೆ ಬಂದಾಗ ಅವರನ್ನು ನೋಡಲು ಹೊರಟ ಶೂದ್ರ ಜನಾಂಗದ ಶಿಸ್ತು. ಜನರ ಮನಸ್ಸಿನಲ್ಲಾದ ಬದಲಾವಣೆಯನ್ನು ಸೂಕ್ಷ್ಮವಾಗಿ ಕಾದಂಬರಿಯಲ್ಲಿ ಅವಲೋಕಿಸಲಾಗಿದೆ. ಕೊರಗರು, ಮುಂಡೇಲರು, ಶಿಸ್ತು ಸುಭದ್ರತೆಯ ಕಂಡು ಹೆಬ್ಬಾರರಿಗೆ ಆಶ್ಚರ್ಯವಾಗುತ್ತದೆ. ಊರಿಗೆ ಮರ್ಯಾದೆ ಸಾರುದಿಕ್ಕೆ ಇವೆಂದೂ ಇಷ್ಟೊಂದು ಶಿಸ್ತಾಗಿ ಮೈಯ ಕೊಳ ಜಾರಿಸಿ ಹೊಸ ಚಲ್ಲಣ ತೊಟ್ಟು ಹೋದುವೇಅಲ್ಲ. ಇಂಥಾ ಸಂಭ್ರಮವನ್ನು ತಾನೆಂದೂ

ಈ ಹೊತ್ತಿಗೆ ಕಂಡಿಲ್ಲ ಎಂಬ ಹೆಬ್ಬಾರರ ಮಾತುಗಳಲ್ಲಿ ಶೂದ್ರಾತಿಶೂದ್ರರಲ್ಲಾದ ಬದಲಾವಣೆಯನ್ನು ಸೂಚಿಸುತ್ತದೆ. ಹೆಬ್ಬಾರರು ಗಾಂಧಿಯನ್ನು ನೋಡಲು ಹೋಗುವುದು ಬೇಡವೆಂಬ ಸಿಟ್ಟಿನಿಂದ ಹೇಳಿರುತ್ತಾರೆ. ಈ ವಿಷಯವನ್ನು ಕೇಳದ ಬೆಸ್ತರು ಗಾಂಧಿಯವರು ಹೇಳಿದಾಗ ಸತ್ಯಾಗ್ರಹ ಮಾಡಿರೋ, ಬೈದರೆ ಕಂಬಳಕ್ಕೆ ಪನಿಕುಳ್ಳುವುದಿಲ್ಲ. ಡೋಲು ಬಾರಿಸುವುದಿಲ್ಲ ಅಂತ ಹೇಳಿ ಎಂದು ಹೇಳಿಕೊಡುತ್ತಾರೆ ಹೆಬ್ಬಾರರಿಗೆ ಇವರ ಅನಿವಾರ್ಯತೆ ಇರುವಷ್ಟೇ ಕೆಳವರ್ಗದವರಿಗು ಹೆಬ್ಬಾರರ ಅನಿವಾರ್ಯತೆ ಇದೆ. ಏಕೆಂದರೆ ಅವರ ಜಮೀನಿನಲ್ಲಿ ಜೀತದಾಳುಗಳಾಗಿ ದುಡಿಯದೆ ವಿಧಿಯಿಲ್ಲ. ಸ್ವತಂತ್ರ ಅಸ್ತಿತ್ವದ ಬದುಕು ಇವರದಲ್ಲ. ಅದಕ್ಕಾಗಿ ಉಳ್ಳಾಯನೆದುರು ದನಿಯೆತ್ತಿದರೆ ನಾಗರ ಹಾವಿನ ಎದುರು ವಾದಿಸಿದಂತಾಗುವುದು. ಕಾಡಿನ ಪ್ರಾಣಿಗಳಿಗಿರುವಷ್ಟೇ ಬೆಲೆ, ಸ್ಥಾನ ಮಾನ ನಮಗೂ ಎಂದುಕೊಂಡು ಸುಮ್ಮನಾಗುತ್ತಾನೆ.

'ಜೀವನ ಪರ್ಯಂತೆ ಹೀಗೆಯೇ ಜೀತದಾಳುಗಳಾಗಿ ದುಡಿದೇ ಸಾಯುವ ಇವರಿಗೆ ಗಾಂಧಿ ಬಂದರೂ ಒಂದೇ ಫರಂಗಿಯವರೂ ಒಂದೇ, ಯಾವನೇ ಅರಸು ಬಂದರೂ ಏನೋನೂ ಬದಲಾವಣೆ ಇಲ್ಲದ ಜೀವನ ಅವರದ್ದು ಎಂಬ ಕೃತಿಕಾರರು ಹೇಳುತ್ತಾರೆ. ಜಮೀನ್ದಾರ, ಮಾಲೀಕ ಇವರ ಅಡಿಯಳಾಗ ಬದುಕುವ ಒಂದುವರ್ಗಕ್ಕೆ ಎಂಥ ರಾಜಕೀಯ ವಿಪ್ಲವಗಳು ಸಂಭವಿಸಿದರೂ ಅವರ ಜೀವನದಲ್ಲಿ ಯಾವ ಬದಲಾವಣೆಗಳನ್ನು ತರುವುದಿಲ್ಲ. ದುಡಿದು ತಿಂದರೂ ಇನ್ನೊಬ್ಬರ ಹಂಗಿನಲ್ಲಿ ಜೀವಿಸುವುದು ತಪ್ಪುವುದಿಲ್ಲ.

ಎಳೆಯದೆಂದೂ ಹಳೆಯುವುದಕ್ಕೆ ಬಲಿಯುವುದಿಲ್ಲವಂತೆ ಹಾಗೆಯೇ ದ್ರೌಪದಿ ತನ್ನ ತಂದೆಯ ಧೋರಣೆಗಳನ್ನು ಧಿಕ್ಕರಿಸಿದವಳು. ತಿಂಗಳರಾಯರು, ಮಾರಪ್ಪ ಮೊದಲಾದವರ ಸಮ್ಮುಖದಲ್ಲಿ ಆದ್ರಾಮನೊಂದಿಗೆ ವಿವಾಹವಾಗುತ್ತಾಳೆ. ಕತ್ತಿನ ಹಿಡಿ ಆತನೊಳಗಿದೆ. ಆದರ ಹರಿತ ಬಾಯಿ ತನ್ನೊಳಗಿದೆ ಎಂದು ಹೆಬ್ಬಾರರು ಸೂಕ್ಷ್ಮವಾಗಿ ಬಿಡಿಸಿಕೊಳ್ಳಲು ಪ್ರಯತ್ನಿಸುತ್ತಾರೆ. ದ್ರೌಪದಿಯನ್ನು ತಮ್ಮ ಸಂಪ್ರದಾಯದ ಬೀಗ ಮುದ್ರೆಯೊಳಗೆ ಸುರಕ್ಷಿತವಾಗಿಡಲು ಸಾಧ್ಯವಾಗುವುದಿಲ್ಲ. ಅಪ್ಪಯ್ಯನ ಮಾನವೀಯತೆ ಇಲ್ಲದ ತೀಕ್ಷ್ಣ ಕಠೋರ ದೃಷ್ಟಿಯಿಂದ ಬೇಸತ್ತವಳು ದ್ರೌಪದಿ ಮಾನವೀಯತೆ ಇಲ್ಲದ ಧರ್ಮಶಾಸ್ತ್ರವನ್ನೇ ಧಿಕ್ಕರಿಸುವ ಮನಃಸ್ಥಿತಿಯನ್ನು ರೂಢಿಸಿಕೊಳ್ಳುವಂತೆ ಮಾಡುತ್ತದೆ. ಸಾಂಪ್ರದಾಯಿಕ ಬದುಕಿನಲ್ಲಿ ಮಮತೆ, ವಾತ್ಸಲ್ಯವೆಂಬುದು ನಾವು ನಂಬಿಕೊಂಡು ಬಂದಿರುವ ಆಚಾರ, ವಿಚಾರ, ಕಟ್ಟಲೆ, ನೀತಿ ರೀತಿಗಳ ಮಿತಿಯಲ್ಲೇ ಸರಿಯಬೇಕು. ಈ ನಿಯಮಗಳ ಪಾಲನೆಗಾಗಿ ಮಾನವೀಯತೆಯನ್ನು ತಮ್ಮಿಂದ ದೂರ ಸರಿಸುತ್ತಾರೆ. ರುಕುಣಿಯಮ್ಮ ಹೆಬ್ಬಾರರ ಅಳಿಯ ನರಹರಿ ಸತ್ತಾಗ ದ್ರೌಪದಿಯನ್ನು ಗಂಡನ ಮನೆಯಲ್ಲಿ ಬಿಟ್ಟರೆ ಅನಾಹುತ ಸಂಭವಿಸಿತು ಎಂದು ತಮ್ಮ ಭದ್ರ ಬಿಗಿಕಾವಲಿನಲ್ಲಿ ಇಟ್ಟುಕೊಂಡಿದ್ದರು ಅದನ್ನು ಮೀರಿ ಮದುವೆಯಾದ ದ್ರೌಪದಿಗೆ ಘಟಶ್ರದ್ಧಾ ಮಾಡಿ ತಮ್ಮ ಪಾಲಿಗೆ ಸತ್ತಳೆಂದು ಸಮಾಧಾನ ತಂದುಕೊಂಡರು. ದ್ರೌಪದಿ ದೋಮಬ್ಯಾರ್ದಿ, ರೋಮ, ದೋಪಮ್ಮ ಆಗಿ ತನ್ನ ಅಸ್ತಿತ್ವವನ್ನು ಗುರುತಿಸಿಕೊಂಡಳು.

ಉಪ್ಪಿನ ಸತ್ಯಾಗ್ರಹ, ಮಧ್ಯಪಾನನಿಷೇಧ, ಪರದೇಶಿ ವಸ್ತ್ರ ಬಹಿಷ್ಕಾರ, ಚಳವಳಿಗಳನ್ನು ಭಾಗವಹಿಸಿ ಅದ್ರಾಮ ಮರಣ ಹೊಂದಿದನು. ಆಗಲೂ ಸುರಗಿಮಠ ಕಾರುಣ್ಯದಿಂದ ಪ್ರತಿಕ್ರಿಯಿಸಲಿಲ್ಲ. ಐತು, ಪೊತ್ಸಲ, ತಿಂಗಳಾಯ, ಮಾರಪ್ಪ, ದಾರು ಮೊದಲಾದವರ ಸಾಂತ್ವನಗಳೆ ದ್ರೌಪದಿಯ ಬದುಕಿಗೆ ಸಮಾಧಾನ ತಂದದ್ದು.

ಸ್ತ್ರೀ ಸಹಜ ಬದುಕಿಗಿಂತ ಭಿನ್ನವಾದ ಇಬ್ಬರು ಸ್ತ್ರೀಪಾತ್ರಗಳು ಈ ಕಾಂದಬರಿಯಲ್ಲಿ ಮುಖ್ಯವಾಗುತ್ತದೆ. ವಿಧವೆ ದ್ರೌಪದಿ, ಗರ್ಭಕೋಶ ಇಲ್ಲದ ದಾರು. ದ್ರೌಪದಿ-ದಾರು ಒಂದೇ ದೋಣಿಯಲ್ಲಿ ಪಯಣಿಸುವವರು ಎಂದು ಕೃತಿಕಾರರು ಹೇಳುತ್ತಾರೆ. ಇಬ್ಬರಲ್ಲಿ ಸ್ವಲ್ಪ ಹೆಚ್ಚು ಕಡಿಮೆ ಸಮಸ್ಯೆ ಸವಾಲುಗಳು, ನಿರೀಕ್ಷಿಸಿದ ಅವಗಡಗಳು ಬದುಕಿನಲ್ಲಿ ಸಂಭವಿಸಿವೆ. ಇದೇ ಅವರಿಬ್ಬರ ನಡುವಿನ ಆತ್ಮೀಯತೆಗೆ ಕಾರಣವಾಗಿರಲೂಬಹುದು. ಈ ಎರಡೂ ಪಾತ್ರಗಳ ನೋವಿಗೂ ಕಾದಂಬರಿಯಲ್ಲಿ ಸಮಾಧಾನದ ಮುಕ್ತಾಯ ಸಿಗುತ್ತದೆ. ಮಟ್ಟಮ್ಮಕ್ಕ ಲೋಕದ ಕಣ್ಣಿಗೆ ಅಸಹ್ಯಳೆನಿಸಿದರೂ ಸಂಪ್ರದಾಯ ನಿಷ್ಠಳಾದರು. ರುಕುಣಿಯಮ್ಮನಿಗೆ ಹೋಲಿಸಿದರೆ ಮಾನವೀಯತೆ, ಅನುಕಂಪ, ವಿಶ್ವಾಸ, ನಂಬಿಕೆಗಳನ್ನು ಹೆಚ್ಚು ಎತ್ತರದವಳಾಗುತ್ತಾಳೆ. ನನ್ನ ಪಾಲಿನ ಕರ್ತವ್ಯವನ್ನು ಸ್ವಲ್ಪವಾದರೂ ವಿವೇಚಿಸಿ ತನ್ನ ಜೀವನದಲ್ಲಿ ಅಳವಡಿಸಿಕೊಳ್ಳುವುದನ್ನು ಕಾಣಬಹುದು. ಪುಟ್ಟಮ್ಮಕ್ಕನ ಗಂಡ ನಾರಾಯಣಭಟ್ಟ ತಾನು ಚೆನ್ನಾಗಿರುವವರೆಗೂ ಬೇರೆ ಊರಿಗೆ ಹೋಗಿ ಮತ್ತೊಬ್ಬಳೊಂದಿಗೆ ಚಿಂತೆ ಇಲ್ಲದೆ ಜೀವಿಸಿದರು. ಕುಷ್ಠರೋಗ ಪೀಡಿತರಾಗಿ ಬಂದದ್ದು ಹೆಂಡತಿ ಪುಟ್ಟಮ್ಮಕ್ಕನ ಬಳಿಗೆ. ಪುಟ್ಟಮ್ಮಕ್ಕ ಏನೊಂದು ಮಾತನಾಡದೆ ಆತನ ಶುಶ್ರೂಷೆಯಲ್ಲಿ ತೊಡಗುತ್ತಾಳೆ. ತನ್ನ ಗಂಡನ ಮನಸ್ಸಿಗೆ ನೋವುಂಟು ಮಾಡಬಾರದೆಂದು ಗಾಂಧಿಯನ್ನು ನೋಡಬೇಕೆನ್ನುವ ತನ್ನ ಹೆಬ್ಬಯಕೆಯನ್ನು ನಿರ್ಲಕ್ಷಿಸುತ್ತಾಳೆ. ಹೆಬ್ಬಾರರಿಗೆ ತಿಳಿಯದಂತೆ ದ್ರೌಪದಿ – ಅದ್ರಾಮರನ್ನು ವಿಚಾರಿಸಿಕೊಂಡು ಬರುತ್ತಾಳೆ. ಅದ್ರಾಮ ಸತ್ತಾಗಲೂ ದ್ರೌಪದಿಗೆ ಸಮಾಧಾನ ಹೇಳಲು ಮುಂದಾಗುತ್ತಾಳೆ.

ರುಕುಣಿಯಮ್ಮ ಪುಟ್ಟಮ್ಮಕ್ಕ ವಯೋಮಾನದಲ್ಲಿ ಸಮಾನರಾದರೂ ಬದುಕಿನ ಸಮಸ್ಯೆಗಳಲಿ ಒಬ್ಬರಿಗಿಂತ ಒಬ್ಬರು ಭಿನ್ನ. ಮಾರಪ್ಪನ ತಾಯಿ ಸೂರಕ್ಕ ಮನೆಯ ಬಗ್ಗೆ ಬೇಜವಾಬ್ದಾರಿ ಹೊಂದಿದ ಮಗನನ್ನೂ ಯಾವಾಗಲೂ ಬಯ್ಯುತ್ತಿರುತ್ತಾಳೆ. ಗಾಂಧಿದೇಶ ಎಂದು ತಿರುಗುವ ಮಗನ ಬಗ್ಗೆ ಆಕೆಗೆ ಅಸಮಧಾನ, ಶಿಖಂಡಿ ಎಂದು ಊರಿನವರೆಲ್ಲ ಆಡಿಕೊಳ್ಳುತ್ತದ್ದರೂ ಮಗ ದಾರುವನ್ನು ಮದುವೆಯಾಗುತ್ತೇನೆಂದಾಗ ತನ್ನ ಮನೆಗೆ ಸೊಸೆಯಾಗಿ ಸ್ವೀಕರಿಸುತ್ತಾಳೆ. ದ್ರೌಪದಿ, ದಾರು ತಾವೆ ಚರಕದಿಂದ ನೂತು ಖಾದಿ ಸೀರೆ ಉಡಲು ಮುಂದಾಗುತ್ತಾರೆ. ಗಾಂಧಿ ನಿಧಿಗೆ ತಮ್ಮೆಲ್ಲಾ ಒಡವೆಗಳನ್ನು ತಾವಾಗಿಯೇ ಅರ್ಪಿಸುತ್ತಾರೆ.

ಸ್ತ್ರೀ ಸಹಜ ಮನಸ್ಸಿನ ತೊಳಲಾಟ, ಆಸೆ, ಕನಸು, ಬಯಕೆಗಳು, ಅವುಗಳ ಈಡೇರಿಕೆ ಮೊದಲಾದವುಗಳೇ ಕಾದಂಬರಿಯಲ್ಲಿ ವಿಶೇಷವಾಗಿ ವರ್ಣಿತವಾಗಿದೆ.

ಈ ಕಾದಂಬರಿಯಲ್ಲಿ ಕಾದಂಬರಿಕಾರರೇ ನೇರವಾಗಿ ಘಟನೆಗಳನ್ನು ನಿರೂಪಿಸುತ್ತಾ ಹೋಗುತ್ತಾರೆ. ಆದ್ದರಿಂದ ಇಲ್ಲಿನ ಕಥನವಿಧಾನವನ್ನು ಪ್ರತ್ಯಕ್ಷ ವಿಧಾನ ಎನ್ನಬಹುದು. ಪಾತ್ರ ಪ್ರಧಾನವಾದ ಕಾದಂಬರಿಯಾದ್ದರಿಂದ ಪಾತ್ರ ಚಿತ್ರಣಕ್ಕೆ ಪ್ರಧಾನ್ಯವಿದ್ದರೂ ವಸ್ತುವಿನೊಂದಿಗೆ ಪಾತ್ರದೊಡನೆ ನಿಕಟ ಸಂಬಂಧವಿದೆ. ಈ ಕೃತಿಯಲ್ಲಿ ಕಥನಕ್ಕಿಂತ ಸಂಭಾಷಣೆಗೆ ಹೆಚ್ಚು ಒತ್ತು ಕೊಟ್ಟಿದೆ. ಇದರಿಂದ ಪಾತ್ರಗಳ ಮೇಲೆ ಬೆಳಕು ಬೀಳುವುದಲ್ಲದೆ ಕಥೆಯೂ ನಿಲ್ಲದೆ ಬೆಳೆಯುತ್ತಾ ಹೋಗಿದೆ. ಸಂಭಾಷಣೆಯು ಕಾದಂಬರಿಗೆ ನಾಟಕೀಯತೆ ಸ್ವಾರಸ್ಯಕರವಾಗಿ ಸನ್ನಿವೇಶಕ್ಕೆ ತಕ್ಕಂತೆ ಬಂದಿದೆ. ಕಡಲ ಕೆರೆಯ ಜೀವನವನ್ನು ಪ್ರಾದೇಶಿಕ ವೈಶಿಷ್ಟ್ಯದೊಡನೆ ಹೃದ್ಯಂಗಮವಾಗಿ ಚಿತ್ರಿಸಿ ವ್ಯಕ್ತಿಗಳ ಅಂತಃ ಪ್ರೇರಣೆಗಳನ್ನು ಭಾವ ವಿಶೇಷಗಳನ್ನು ಹೊರಗೆಡಹಿದ್ದಾರೆ. ಬಾಳಿನ ಸಮಸ್ಯೆಗಳನ್ನು ಕುರಿತು ತನ್ನ ವಿಶಿಷ ದೃಷ್ಟಿ ದರ್ಶನಗಳನ್ನು ಪಾತ್ರಗಳ ಮೂಲಕ ಪ್ರತ್ಯಕ್ಷವಾಗಿ ಕೆಲವೊಮ್ಮೆ ಪರೋಕ್ಷವಾಗಿ ಸೂಚಿಸಿದ್ದಾರೆ.

ಹಾಗೆಯೇ ಖಾದಿಯ ಬಗ್ಗೆಯೂ ಸಹ ಮಾತನಾಡಿದರು "ಸನಾತನ ಹಿಂದೂಧರ್ಮದ ಪಂಚಾಂಗದಲ್ಲೇ ಕೆಲವು ಮೂಲ ದೋಷಗಳಿವೆ. ಅದರಲ್ಲಿ ಜಾತಿವ್ಯವಸ್ಥೆ-ಅಸ್ಪೃಶ್ಯತೆಯೂ ಒಂದು ನಮ್ಮ ತಾಯಿ ಭಾರತೀಯಳಯ ಮುಕ್ತಿ ಪಡೆಯಬೇಕಾದರೆ, ಪರಂಗಿಯವರ ದಾಸ್ಯದಿಂದ ಹೊರಬರಲೇಬೇಕಾದರೆ ಈ ಮುಖ್ಯ ದೋಷವನ್ನೆ ನಿರ್ಮೂಲನೆ ಮಾಡಬೇಕಾದುದು ಪ್ರತಿಯೊಬ್ಬ ಹಿಂದುವಿನ ಆದ್ಯ ಕರ್ತವ್ಯ" ಎಂದು ವಿಸ್ತಾರವಾಗಿ ಹಿಂದೂಧರ್ಮದ ದೋಷವನ್ನು ಹೇಳಿದರು. ಜೊತೆಗೆ ಒಡವೆಗಳ ಸಹಾಯ ನಮ್ಮ ೧೬ಸಾವಿರ ಬಡ ಸೋದರಿಯರ ಒಂದು ದಿನದ ಊಟಕ್ಕಾಗೆಂಬುದನ್ನು ಸಹ ತಿಳಿಸಿದರು. ಗಾಂಧಿ ೩ನೇ ಬಾರಿ ಬಂದಾಗ ಚಳುವಳಿಯಲ್ಲಿ ಸತ್ತ ಅದ್ರಾಮನ ಪತ್ನಿ ಎಂದು ತಿಳಿದು ದ್ರೌಪದಿಯ ಬಳಿ ಸ್ವತಃ ತಾವೇ ತೆರಳಿ ವಿಚಾರಿಸುವರು. ಅಲ್ಲದೆ ವೇದಿಕೆಯಲ್ಲಿಯೆ ಕೂರಿಸಿ ಮೂಗುತಿಯನ್ನು ದಾರುವಿನಿಂದ ತೊಡಿಸುವಂತೆ ಹಾಗೂ ಚಂದ್ರಾಹಾರವನ್ನು ದ್ರೌಪದಿಯ ಮಗ ಭರತಕುಮಾರನಿಂದ ಕೊರಳಿಗೆ ಹಾಕಿಸಿ ನಂತರ ಆಕೆಗೆ ಹೂಮಾಲೆ ಹಾಕಿ ಕುಂಕುಮವನ್ನು ಸಹ ಬಾಕಿ ವಿಧವೆಯರು ತನ್ನೆಲ್ಲಾ ಆಸೆಗಳನ್ನು ಕುಗ್ಗಿಸಿಕೊಳ್ಳುವಂತಿಲ್ಲವೆಂದು ಈ ಮೂಲಕ ಸಾಂಕೇತಿಕವಾಗಿ ತೋರಿಸುವರು.

ಗಾಂಧಿಜಿಯವರ ತತ್ವಸಿದ್ಧಾಂತಗಳ ಹಿನ್ನೆಲೆಯಲ್ಲಿ ಅವರ ಭೇಟಿಯನ್ನೆ ಒಂದು ಪ್ರಮುಖವಾದ ವಿಷಯವಾಗಿ ಎತ್ತಿಕೊಂಡು ಇಡೀ ಕಾದಂಬರಿಯನ್ನು ಕೃತಿಕಾರರು ಕಡೆದು ನಿಲ್ಲಿಸಿದ್ದಾರೆ. ಗಾಂಧೀಯ ವಿಚಾರಧಾರೆಗಳಿಗೆ ಮನಸೋತು ಅವರ ಪ್ರಭಾವ ಪ್ರೇರಣೆಗೆ ಒಳಗಾಗಿ ಸಮಾಜದ ಬದಲಾವಣೆಗೆ ಯತ್ನಿಸಿರುವುದು ಈ ಕಾದಂಬರಿಯ ಮತ್ತೊಂದು ಹೆಗ್ಗಳಿಕೆ.

ಇಲ್ಲಿ "ಗಾಂಧಿಬಂದ" ಎಂಬುದು ಕೇವಲ ಗಾಂಧಿ ಬರುವುದಾಗದೆ "ಬದಲಾವಣೆ ತಂದ" ಎಂಬುದರ ಅರ್ಥವನ್ನು ನೀಡುತ್ತದ. ಗಾಂಧಿ ಕೇವಲ ೩ಬಾರಿ ಭೇಟಿ ನೀಡುವ ಆ ಸಮಯ ಮುಂದಿನ ಹಲವು ವರ್ಷಗಳ ಬದಲಾವಣೆಗೆ ಮುನ್ನುಡಿ ಬರೆಯಿತು. ಹಾಗೂ ಸನಾತನ ಧರ್ಮ ಶತಶತಮಾನಗಳಿಂದ ಗಟ್ಟಿಯಾಗಿ ಬೇರೂರಿದ್ದ ಅನಿಷ್ಟ, ಅರ್ಥವಿಲ್ಲದ ಆಚರಣೆಯ ತಳಪಾಯವನ್ನು

ಒಂದೇ ಬಾರಿಗೆ ಅಲುಗಾಡಿಸುವಂತಾದದ್ದು "ಗಾಂಧಿ" ಹಾಗೂ ಅವರ "ತತ್ವಗಳ" ಬಲಶಾಲಿತನಕ್ಕೆ ಒಂದು ಉದಾಹರಣೆಯಾಗಿದೆ.

'ಗಾಂಧಿಬಂದ' ಕೃತಿಯಲ್ಲಿ ರಾಜಕೀಯ ವಿಷಯಗಳಿಗಿಂತ ಸಾಮಾಜಿಕ ಅಂಶಗಳ ಹೆಚ್ಚಾಗಿ ಕಂಡುಬರುತ್ತದೆ. ಆದ್ದರಿಂದ ಇದೊಂದು ಸಮುದಾಯದ ಅಥವಾ ಸಾಮಾಜಿಕ ಕಾದಂಬರಿಯಾಗಿದೆ. ಸಹಪಂಕ್ತಿ ಭೋಜನ, ಅಂತರ್ಜಾತಿ ವಿವಾಹ, ಅಸ್ಪೃಶ್ಯತೆಯ ನಿವಾರಣೆ, ಸನಾತನ ಧರ್ಮದ ರೀತಿ-ರಿವಾಜುಗಳಿಗೆ ಧಿಕ್ಕಾರ, ದೇವಾಲಯ ಒಳಪ್ರವೇಶ, ಸ್ವಾತಂತ್ರ್ಯಕ್ಕಾಗಿ ಗಾಂಧಿನಿಧಿಗೆ ಕಾಣಿಕೆ ಸಲ್ಲಿಸುವ ಪರಿ, ವರ್ಗವರ್ಣಗಳ ಮರೆತು ಚಳುವಳಿಯಲ್ಲಿ ಭಾಗವಹಿಸುವ ಮೂಲಕ ಹಾಗೂ ಲಿಂಗತಾರತಮ್ಯವನ್ನು ಹೋಗಲಾಡಿಸುವ ಹಲವಾರು ಕ್ರಾಂತಿಕಾರಕ ಸಾಮಾಜಿಕ ಬದಲಾವಣೆಯ ವಿಚಾರಗಳು ಈ ಕಾದಂಬರಿಯಲ್ಲಿ ಕಂಡುಬರುತ್ತದೆ.

ಇತಿಹಾಸಕ್ಕೆ ಅಥವಾ ಸ್ವಾತಂತ್ರ್ಯ ಪೂರ್ವದ ಹೋರಾಟಗಳೊಂದಿಗೆ ತುಳುನಾಡಿನ ಸಂಸ್ಕೃತಿಯ ಹಿನ್ನೆಲೆಯೊದಗಿಸಿ ಕಥೆ ಹೇಳಿರುವ ಲೇಖಕಿಯ ಜಾಣ್ಮೆ ಮೆಚ್ಚುವಂತದ್ದು, ಸಮಾಜದ ಉನ್ನತ ವರ್ಗದಿಂದ ಹಿಡಿದು ಕೆಳವರ್ಗವನ್ನು ಒಳಗೊಂಡಂತೆ ಇಡೀ ಕರಾವಳಿ ಸಂಸ್ಕೃತಿ, ರಾಜಕೀಯ, ಸಾಮಾಜಿಕ, ಆರ್ಥಿಕ ವಿಷಯಗಳನ್ನು ಒಂದೇ ಕಾದಂಬರಿಯಲ್ಲಿ ಹೇಳಿರುವ ಪ್ರತಿಭೆಗೆ ಎಲ್ಲರೂ ಒಂದು ಕ್ಷಣ ಅಭಿನಂದನೆ ತಿಳಿಸಬೇಕು.

ಈ ಹಿನ್ನಲೆಯಲ್ಲಿ ಸಿ.ಎನ್.ರಾಮಚಂದ್ರನ್ ಅವರ ಹೇಳಿಕೆ ಸಮಂಜಸವಾದುದು. ಕೃತಿಯ ಹೆಸರು "ಗಾಂಧಿಬಂದ" ಎಂದಿದೆ. ಸಾಂಸ್ಕೃತಿಕ ಆತ್ಮಕಥನದ ಜೊತೆಗೆ ಇತಿಹಾಸವನ್ನು ಪ್ರತಿಬಿಂಬಿಸುವಂತದ್ದು ಎಂದೂ ಹೇಳುತ್ತಾರೆ. ಇಲ್ಲಿ ಇತಿಹಾಸವನ್ನು ಪ್ರತಿಬಿಂಬಿಸುವ ಅಂಶಗಳಿಗೆ ಹೆಚ್ಚಿನ ಪ್ರತಿನಿಧ್ಯ ನೀಡಿಲ್ಲ. ಕೃತಿಗೆ ಕೇಂದ್ರವಸ್ತು ಮತ್ತು ಸಾಂಸ್ಕೃತಿಕ ಅಂಶಗಳು. ಈ ಸಾಂಸ್ಕೃತಿಕ ಅಂಶಗಳು ಮತ್ತು ಬದಲಾವಣೆಗೆ ಒಳಗಾಗುವ ಪ್ರಕ್ರಿಯೆ. ಈ ಪ್ರಕ್ರಿಯೆಯಲ್ಲಿ ಗಾಂಧೀಜಿ ವಹಿಸುವ ಪಾತ್ರ ಸಾಮಾಜಿಕ ಪದ್ಧತಿಗಳಲ್ಲಿ ಆಗುವ ಬದಲಾವಣೆ ಮುಖ್ಯಕಾರಣ ಗಾಂಧೀಜಿಯವರ ಅನುಯಾಯಿಗಳು ಈ ಹಿನ್ನೆಲೆಯಲ್ಲಿ ಅಂದರೆ ಗಾಂಧಿ ಬಂದುದರಿಂದ ಆದ ಸಾಂಸ್ಕೃತಿಕ ಮಾರ್ಪಾಡುಗಳನ್ನು ವಿವರಿಸಲು ಗಾಂಧಿಯ ಅಂಶಗಳು ಪೂರಕವಾಗಿ ಬರುತ್ತವೆ. ಗಾಂಧಿಬಂದ ಎಂದರೆ ಬದಲಾವಣೆಗಳನ್ನು ತಂದದ್ದು ಎಂಬರ್ಥದಲ್ಲಿ ಗ್ರಹಿಸಬೇಕಾಗುತ್ತದೆ.

ಒಟ್ಟಿನಲ್ಲಿ ಗಾಂಧಿಬಂದ ಕಾದಂಬರಿಯಲ್ಲಿ ಅಂದು ಕೊಂಡದ್ದನ್ನು ಬಹುಮಟ್ಟಿಗೆ ಎಲ್ಲಾ ಪಾತ್ರಗಳು ಮಾಡುತ್ತವೆ. ಆತ್ಮತೃಪ್ತಿ ಪಟ್ಟುಕೊಳ್ಳುವಷ್ಟಾದರೂ ಸಫಲತೆಗಳು ಗೋಚರಿಸುತ್ತೇವೆ. ಆದ್ದರಿಂದಲೇ ಸಾಮಾಜಿಕ ಬದಲಾವಣೆಯಲ್ಲಿ ಸ್ವಾತಂತ್ರ್ಯ ಸಂಗ್ರಾಮ ಹಾಗೂ ಗಾಂಧಿಯವರ ಹೇಳಿಕೆಯು ಸಾಮಾನ್ಯ ಜನರ ಮೇಲೆ ಉಂಟುಮಾಡಿದ ಪರಿಣಾಮಗಳನ್ನು ತಂದ ಮಾರ್ಪಾಡುಗಳನ್ನು ಈ ಕಾದಂಬರಿಯಲ್ಲಿ ಕಾಣಬಹುದು.

## ಉಪಸಂಹಾರ

ತುಳುನಾಡಿನ ಸಾಂಸ್ಕೃತಿಕ ವೈಶಿಷ್ಟ್ಯಗಳನ್ನು ಪ್ರಧಾನವಾಗಿ ಎತ್ತಿಕೊಂಡು ರಾಜಕೀಯ ವಿಷಯಗಳೊಂದಿಗೆ ಬೆಸೆಯುತ್ತಾ ಸಾಮಾಜಿಕ ಜನಜೀವನದಲ್ಲಿ ತರುವ ಬದಲಾವಣೆಗಳತ್ತ ಕೃತಿಕಾರರ ಗಮನ ಕೇಂದ್ರಿಕೃತವಾಗಿದೆ. ಒಂದು ಜನಸಮುದಾಯದಲ್ಲಿ ಸನಾತನ ಪರಂಪರೆಯನ್ನು ಅಲ್ಲಾಡಿಸುವ ಬದಲಾವಣೆಯಾಗುವಂತೆ ಮಾಡುವ ರಾಜಕೀಯ ಸನ್ನಿವೇಶ ಇಲ್ಲಿ ಸಾಮಾಜಿಕ ಬದಲಾವಣೆಗೆ ಪ್ರಮುಖ ಪಾತ್ರ ಒದಗಿಸುತ್ತದೆ.

ಪರಂಪರೆಯ ಮೌಲ್ಯಗಳನ್ನು ಒಂದೆಂದು ಭಾವಿಸಿದ್ದ ಜೀತಪದ್ಧತಿಯ ವಿವರವಾದ ವಿಶ್ಲೇಷಣೆಯಿದೆ. ಜೊತೆಗೆ ವರ್ಗ ಸಂಘರ್ಷ, ಸ್ತ್ರೀ ತಾರತಮ್ಯ, ಲಿಂಗತಾರತಮ್ಯ ಮೊದಲಾದ ಸಂಗತಿಗಳು ಚರ್ಚಿತವಾಗಿವೆ. ದೇವರು, ಪ್ರೀತಿ, ಸಮಾನತೆ, ಸ್ನೇಹ, ಮಾನವತೆ, ಸಹಾಯ ಮನೋಭಾವ ಮೊದಲಾದ ಸಾರ್ವತ್ರಿಕ ಸಂಗತಿಗಳು ಸಂದೇಶಾತ್ಮಕವಾಗಿದೆ.

ಮಂಗಳೂರು ಪೇಟೆಗೆ ಇಬಾರಿ ಆಗಮಿಸಿದ ಮಹಾತ್ಮ ಗಾಂಧೀಯ ಭಾಷಣ ತತ್ವಗಳು, ಶಿಕ್ಷಣವಂಚಿತ ಸಾಮಾನ್ಯ ಜನರಿಂದ ಹಿಡಿದು ಉನ್ನತ ವರ್ಗದ ಜನರವರೆಗೂ ಮೆಚ್ಚಿಗೆಯಾಗಿ ಅವರನ್ನು ಕಾಣಲು ತಂಡೋಪತಂಡವಾಗಿ ಬರುವರು. ಗಾಂಧಿಯ ತತ್ವಗಳನ್ನು ಸ್ವತಃ ಪಾಲಿಸಿ ಇತರರೂ ಪಾಲಿಸುವಂತೆ ಪ್ರೇರೇಪಿಸುವ ಕಾರ್ಯದಲ್ಲಿ ಮಾರಪ್ಪ, ಅದ್ರಾಮ, ತಿಂಗಳಾಯರು, ಕಾರ್ನಾಡರ ಪಾತ್ರ ಅನನ್ಯವಾಗಿದ್ದು, ಕೆಳವರ್ಗದ ಜನರ ಏಳ್ಗೆಗಾಗಿ ಹಗಲಿರುಳು ಶ್ರಮಿಸಿದರು.

ಅಂತರ್ಜಾತಿ ವಿವಾಹ, ವಿದವಾ ಪುನರ್ ವಿವಾಹ, ಸಮಾಜದಿಂದ ಬೇರ್ಪಟ್ಟ ತುಳಿತಕ್ಕೆ ಒಳಗಾದ ಹೆಣ್ಣು ಅಥವಾ ಶಿಖಂಡಿಗೆ ಜೀವನ ನೀಡುವುದು, ಸಹಪಂಕ್ತಿಭೋಜನ, ದೇವಾಲಯ ಒಳ ಪ್ರವೇಶ, ಮುಸ್ಲಿಂ ಕೋಮಿಗೆ ಸೇರಿದ ವ್ಯಕ್ತಿಯೊಬ್ಬನ ಅಂತ್ಯಕ್ರಿಯೆಯನ್ನು ಹಿಂದೂಗಳು ಆಚರಿಸುವುದು. ಗಂಡ ಪತ್ನಿಯನ್ನು ತೊರೆದರೂ ಸಹ ಕೊನೆಗೆ ರೋಗಿಷ್ಠ ಗಂಡನಿಗೆ ಅದೇ ಪತ್ನಿ ಆಶ್ರಯ ನೀಡಿ ಸಂತೈಸುವುದು. ಹಿಡಿದ ಆಮೆಯನ್ನು ಬಿಟ್ಟು ಮತ್ತೆಂದೂ ಆಮೆಯನ್ನು ಹಿಡಿಯಲಾರೆನೆಂದು ಶಪಥ ಮಾಡುವುದು. ಹಿಡಿದ ಆಮೆಯನ್ನು ಬಿಟ್ಟು ಮತ್ತೆಂದೂ ಆಮೆಯನ್ನು ಹಿಡಿಯಲಾರೆನೆಂದು ಶಪಥ ಮಾಡುವುದು. ಕೊನೆಗೆ ಸ್ವತಃ ಗಾಂಧಿಯವರೆ ವಿಧವೆಗೆ ಮುತ್ತೈದೆಯ ರೀತಿ ಸನ್ಮಾನಿಸುವುದು-ಇವೆಲ್ಲವೂ ಸಮಾಜದ ಕ್ರಾಂತಿಕಾರಕ ಬದಲಾವಣೆಗೆ ಸಾಕ್ಷಿಯಾದ ಸಂಗತಿಗಳಾಗಿವೆ.

ಮಧ್ಯಪಾನ ನಿಷೇಧ ಚಳುವಳಿ, ಉಪ್ಪಿನ ಸತ್ಯಾಗ್ರಹ, ಪರದೇಶಿ ವಸ್ತ್ರ ಬಹಿಷ್ಕಾರ ಮುಂತಾದ ಚಳುವಳಿಯೊಂದಿಗೆ ಖಾದಿಪ್ರಚಾರ ಬಹುವಾಗಿ ಸ್ಥಾನಪಡೆದಿದ್ದು, ಅನಕ್ಷರಸ್ಥ ಜನರನ್ನು ಸ್ವಾತಂತ್ರ್ಯ ಹೋರಾಟಕ್ಕೆ ಭಾಗವಹಿಸಲು ಪ್ರೇರಣೆ ನೀಡಿತು ಹಾಗೂ ಅವರಲ್ಲೂ ಸಾಮಾಜಿಕ ಜಾಗೃತಿ ಮೂಡಿಸುವಲ್ಲಿ ಸಹಾಯಕವಾಯಿತು.

ಸಾಂಸ್ಕೃತಿಕ ಹಬ್ಬ ಆಚರಣೆಗಳು ವಿವರವಾಗಿ ಕಲಾತ್ಮಕತೆಯಿಂದ ಮೇಳೈಸಿವೆ. ತುಳುನಾಡಿನ ನಿತ್ಯದ  ಬದುಕೆ ಆಚರಣೆಗಳೆಂಬಂತೆ ಭಾಸವಾಗುತ್ತವೆ. ಸಾಂಸ್ಥಿಕ ಆಚರಣೆಗಳಲ್ಲಿ ರಾಜಕೀಯ ವಿಪ್ಲವದಿಂದ ಹೆಚ್ಚಿನ ಬದಲಾವಣೆಗಳು ಆಗುವುದಿಲ್ಲ. ಸಾಮಾಜಿಕ ಬದುಕಿನಲ್ಲಿ ಜನರ ಯೋಜನೆಯ ಧಾಟಿಯಲ್ಲಿ ಆಗುವ ಮಾರ್ಪಾಡುಗಳ ಚಿತ್ರಣವಿದೆ. ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸುವವರಲ್ಲಿರುವ ಹುಮ್ಮಸ್ಸು ಎಂದೂ ನಿರಾಶೆಯಲ್ಲಿ ಅಂತ್ಯಗೊಳ್ಳುವುದು. ವಿವಿಧ ವರ್ಗದ ಜನತೆಯಲ್ಲಿ ಭಿನ್ನವಾಗಿ ಕಾಣಿಸಿದ ಸ್ವಾತಂತ್ರ್ಯ ಹೋರಾಟ ಮತ್ತು ಗಾಂಧೀಜಿಯ ಚಿತ್ರಣವಿದೆ. ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ಸಂಗತಿಗಳನ್ನು ಮುಖ್ಯವಾಗಿಟ್ಟುಕೊಂಡು ರಚಿತವಾದ "ಗಾಂಧಿ ಬಂದ" ಕಾದಂಬರಿಯಲ್ಲಿ ಸಾಮಾಜಿಕ ಜೀವನದಲ್ಲಾದ ಬದಲಾವಣೆಯ ನೋಟವೊಂದು ಆ ಅಧ್ಯಯನದಲ್ಲಿದೆ.

<u>ಆಕರ ಗ್ರಂಥ</u>

| | | | | |
|---|---|---|---|---|
| 1. | ನಾಗವೇಣಿ ಹೆಚ್. ಗಾಂಧಿಬಂಧ | ಅಹರ್ನಿಶಿ ಪ್ರಕಾಶನ ಜ್ಯೋತಿರಾವ್ ಬೀದಿ, 4ನೇ ಕ್ರಾಸ್, ವಿದ್ಯಾನಗರ, ಶಿವಮೊಗ್ಗ | | 1999 |

ಪರಾಮರ್ಶನ ಗ್ರಂಥಗಳು

| | | | | |
|---|---|---|---|---|
| 1. | ಆಮೂರ ಜಿ.ಎಸ್. | ಕನ್ನಡ ಕಾದಂಬರಿ ಲೋಕದಲ್ಲಿನ ಒಳನೋಟಗಳು | ಸಾಹಿತ್ಯರಂಗ ಪ್ರಕಾಶನ ಧಾರವಾಡ | 2009 |
| 2. | ಶ್ರೀಮತಿ ಆರ್ಯಾಂಭ ಪಟ್ಟಾಭಿ | ಮಹಿಳಾ ಸಾಹಿತ್ಯ ಸಮೀಕ್ಷೆ | ಮುದ್ರಕರು ಶ್ರೀ ರಾಜೇಂದ್ರ 12/1 ಇವನಿಂಗ್ ಬಜಾರ್ ಹಿಂಭಾಗ ಶಿವರಾಂಪೇಟೆ ಮೈಸೂರು – 01. | |
| 3. | ರಂ.ಶ್ರೀ ಮುಗುಳಿ | ಕನ್ನಡ ಸಾಹಿತ್ಯ ಚರಿತ್ರೆ | ಗೀತಾ ಬುಕ್ ಹೌಸ್ ಮೈಸೂರು – 570001 | 2011 |
| 4. | ಸಂಶೋಧನ ವಿದ್ಯಾರ್ಥಿ ವೇದಿಕೆ | ಶೋಧನ ನಡಿಗೆ (ಸಂಶೋಧಕರ ಲೇಖನಗಳ ಸಂಗ್ರಹ) | ಕುವೆಂಪು ಕನ್ನಡ ಅಧ್ಯಯನ ಸಂಸ್ಥೆ ಮೈಸೂರು ವಿ.ವಿ. ಮೈಸೂರು | 2013 |
| 5. | ಶೇಷಗಿರಿರಾವ್ ಎಲ್. ಎಸ್. | ಹೊಸ ಗನ್ನಡ ಸಾಹಿತ್ಯ ಚರಿತ್ರೆ | ಅಂಕಿತ ಪುಸ್ತಕ ಪ್ರಕಾಶನ ಗಾಂಧಿಬಜಾರ್ ಮುಖ್ಯ ರಸ್ತೆ ಬಸವನಗುಡಿ, ಬೆಂಗಳೂರು 560004. | |

